# ನಾಸ್ತಿಕರು–ಆಸ್ತಿಕರು




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**www.thraithashakam.org**





# ನಾಸ್ತಿಕರು–ಆಸ್ತಿಕರು


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ - ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ- ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು- ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು- ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು- ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು- ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು- ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು-ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968. **ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A

Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**

ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).

ಪಿನ್–572150, Cell : 9448177812

**ಶಿವರಾಜ**

(ಸಾ)(ಕಿ) ಕುಕನೂರು (ಪೊ) ಚಿಕ್ಕಸೂಗುರು (ತಾ), ರಾಯಚೂರು (ಜಿ)

Cell : 98443 69516

**R.S. ವೀರಾಚಾರಿ**

ಕತ್ತರಗುಪ್ಪೆ, ವಾರ್ಡ್.ನಂ.–38, ಬೆಂಗಳೂರು–560085

Cell : 9036982829

**G. ಮನೋಹರ್**

ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057

Cell : 7411459912, 9448452963.

**B. ವಾತ್ಸಲ್ಯ**

ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002

Cell : 9901534677, 8880666529

**ಬಸವರಾಜ ಅಂಗಡಿ**

(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)

Cell : 9632418716

**ಸೂರ್ಯ ಪ್ರಕಾಶ**

ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)

Cell : 9611183107, 9164886981

**ಲೀಲಾವತಿ**

ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097

Cell : 9986369118

**T.V. ರಮಣ**

ಕತ್ತರಗುಪ್ಪೆ, ವಾರ್ಡ್.ನಂ. –38, ಬೆಂಗಳೂರು–560068

Cell : 08970772028, 07411459912, 07406039453

**M. ನಾರಾಯಣರೆಡ್ಡಿ**

(Bsc census department retired supervisor)

ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066

Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ನಾಸ್ತಿಕರು–ಆಸ್ತಿಕರು



ಆಸ್ತಿ ಎಂದರೆ ಸಂಪತ್ತು ಎಂದು ಎಲ್ಲರಿಗೂ ತಿಳಿದಿದೆ. ಸ್ಥಿರಾಸ್ತಿಗಳಾಗಲಿ, ಚರಾಸ್ಥಿಗಳಾಗಲಿ ಇರುವವನನ್ನು ಆಸ್ತಿಪರನು ಇಲ್ಲವೆ ಆಸ್ಥಿಕನು ಎನ್ನುತ್ತೇವೆ. ಸಂಸ್ಕೃತ ಭಾಷೆಯಲ್ಲಿ "ಅಲ್ಲ" ಎಂಬ ಅರ್ಥಕ್ಕೆ "ನ" ಎಂಬುವ ಅಕ್ಷರವನ್ನು ಹೇಳುತ್ತಿದ್ದಾರೆ. ಆಸ್ತಿಪರನು ಅಲ್ಲ ಎಂಬ ಅರ್ಥಕ್ಕೆ ನ ಆಸ್ತಿಕನು ಎಂದು ಎನ್ನುತ್ತಿದ್ದರು. ನ+ಆಸ್ತಿಕನು ಎನ್ನುವುದನ್ನು ಕೂಡಿಸಿ ಹೇಳಿದರೆ ನಾಸ್ತಿಕನು ಆಗುತ್ತದೆ. ನಾಸ್ತಿಕನು ಎಂದರೆ ಆಸ್ತಿ ಇಲ್ಲದವನೆಂದು ಅರ್ಥ ಬರುತ್ತದೆ. ಆಸ್ತಿಕನು, ನಾಸ್ತಿಕನು ಅನ್ನುವ ಪದಗಳನ್ನು ಈಗಿನ ಕಾಲದಲ್ಲಿ ಧನವಿರುವವನಿಗೆ, ಧನ ಇಲ್ಲದವನಿಗೆ ಉಪಯೋಗಿಸುತ್ತಿಲ್ಲ. ದೈವ ಭಕ್ತಿ ಇರುವವನನ್ನು ಆಸ್ತಿಕನೆಂದು, ದೈವಭಕ್ತಿ ಇಲ್ಲದವನಿಗೆ ನಾಸ್ತಿಕನೆಂದು ಕರೆಯುವುದು ನಡೆಯುತ್ತಿದೆ. ಇನ್ನೂ ಆಲೋಚಿಸಿದರೆ ಹೇತುಬದ್ಧವಾಗಿ, ಶಾಸ್ತ್ರಬದ್ಧವಾಗಿ ದೈವ ವಿಷಯಗಳನ್ನು ಪ್ರಶ್ನಿಸಿದವನನ್ನು ನಾಸ್ತಿಕನೆಂದು, ಮೂಢನಂಬಿಕೆ ಇರುವವನನ್ನು, ಕುರುಡರಂತೆ ಆಚರಿಸುವವನನ್ನು ಆಸ್ತಿಕರೆಂದು ಹೇಳುವುದು ನೆಡೆಯುತ್ತಿದೆ. ಇನ್ನೂ ಆಲೋಚಿಸಿದರೆ ಕೆಂಪು ಬಟ್ಟೆಗಳನ್ನು ಧರಿಸಿದವರನ್ನು ಆಸ್ತಿಕರೆಂದು ಹೇಳುವುದು, ಕೆಂಪು ಬಾವುಟಗಳನ್ನು ಎತ್ತಿಕೊಂಡವರನ್ನು ನಾಸ್ತಿಕರೆನ್ನುವುದು ನಡೆಯುತ್ತಿದೆ. ಈಗಿನ ಕಾಲದಲ್ಲಿ ಮಾನುಷ್ಯರು, ಆಸ್ತಿಕರು ನಾಸ್ತಿಕರೆಂಬ ಎರಡು ಗುಂಪುಗಳಾಗಿ ವಿಭಜನೆಯಾಗಿದ್ದಾರೆ. ನಮ್ಮ ಗುಂಪು ಬೇರೆ. ನಿಮ್ಮ ಗುಂಪು ಬೇರೆ ಎಂಬುವಂತೆ ಆಸ್ತಿಕರು ಮಾತನಾಡಿರುವುದನ್ನು ನಾಸ್ತಿಕರು ಖಂಡಿಸುವುದು, ಹಾಗೆ ನಾಸ್ತಿಕರು ಮಾತನಾಡಿರುವುದನ್ನು ಆಸ್ತಿಕರು ಖಂಡಿಸುವುದು ಮುಖ್ಯವಾದ ಕೆಲಸವಾಗಿ ನಡೆಯುತ್ತಿದೆ. ಈ ವಿಧವಾಗಿ ಆಸ್ತಿಕರು, ನಾಸ್ತಿಕರು ಇಬ್ಬರು ಶಾಸ್ತ್ರ ಬದ್ದತೆಯನ್ನು ಮರೆತುಹೋಗಿ ಒಬ್ಬರನ್ನೊಬ್ಬರು ಖಂಡಿಸಿಕೊಳ್ಳುವುದೇ ಮುಖ್ಯ ಉದ್ದೇಶವಾಗಿದೆ.

ನಾಸ್ತಿಕರು ಮಾತನಾಡಿದ ಮಾತುಗಳಲ್ಲಾಗಲಿ, ಕೇಳಿದ ಮಾತುಗಳಲ್ಲಾಗಲಿ, ಶಾಸ್ತ್ರಬದ್ದತೆ ಇದೆಯೊ ಇಲ್ಲವಾ ಎಂದು ನೋಡದೇ ಅವರ ಮಾತುಗಳನ್ನು ಖಂಡಿಸುವುದು ಆಸ್ತಿಕರಿಗೂ ಅಭ್ಯಾಸವಾಗಿದೆ. ಹಾಗೆಯೇ

ಆಸ್ತಿಕರ ಮಾತುಗಳಲ್ಲಾಗಲೀ, ಬೋಧನೆಗಳಲ್ಲಾಗಲೀ, ಶಾಸ್ತ್ರಬದ್ಧತೆಯನ್ನು ನೋಡದೇ ಖಂಡಿಸುವುದು ನಾಸ್ತಿಕರಿಗೂ ಅಭ್ಯಾಸವಾಗಿದೆ. ಈ ಎರಡು ವಾದಗಳನ್ನು ಸಾಮಾನ್ಯ ಮನುಷ್ಯ ಯಾವುದನ್ನು ಅನುಸರಿಸಬೇಕೋ ತಿಳಿಯದೆ ಸ್ವಲ್ಪ ಹಿಂದೆ ಮುಂದೆ ನೋಡುತ್ತಿದ್ದಾನೆ. ಪೂರ್ತಿಯಾಗಿ ಆಲೋಚಿಸಿದವನಿಗೆ ಕೆಲವು ವಿಷಯಗಳಲ್ಲಿ ನಾಸ್ತಿಕರಲ್ಲಿ ಸ್ವಚ್ಛತೆ ಕಾಣಿಸುತ್ತಿದೆ, ಮತ್ತೆ ಕೆಲವು ವಿಷಯಗಳಲ್ಲಿ ಅವರ ವಾದಕ್ಕೆ ಹೊಂದಿಕೆ ಆಗುತ್ತಿಲ್ಲ. ಹಾಗೇ ಆಸ್ತಿಕರ ವಿಷಯಕ್ಕೆ ಬಂದರೆ ಕೆಲವು ವಿಷಯಗಳು ಸತ್ಯ ಅನಿಸಿದರು, ಮತ್ತೆ ಕೆಲವು ವಿಷಯಗಳು ಪೂರ್ತಿ ಅಸತ್ಯವಾಗಿ ಕಾಣಿಸುತ್ತಿವೆ. ಯಾರೂ ನೋಡದ ದೇವರನ್ನು, ಯಾರಿಗೂ ತಿಳಿಯದ ದೇವರನ್ನು, ಮಾನವ ಜೀವನದಲ್ಲಿ ಯಾರ ಅನುಭಕ್ಕೆ ಬಾರದ ದೇವರನ್ನು, ನಾವು ನೋಡಿದ್ದೇವೆ ಎಂಬುವ ಆಸ್ತಿಕರ ಮಾತುಗಳು ಪೂರ್ತಿ ಅಸತ್ಯವೆಂದು, ಶಾಸ್ತ್ರಬದ್ಧವಲ್ಲದ ಮಾತುಗಳೆಂದು ತಿಳಿಯುತ್ತಿದೆ. ಈ ವಿಷಯದಲ್ಲಿ ಆಸ್ತಿಕರನ್ನು ಖಂಡಿಸಿ ನಾಸ್ತಿಕರನ್ನು ಸಮರ್ಥಿಸಬಹುದು. ಜಾದುಗರ್ ಆನಂದ್ (ಮಾಂತ್ರಿಕ ಆನಂದ್) ಜನ ಸಮೂಹ ನೋಡುತ್ತಿರುವಂತೆ ತನ್ನ ಮಂತ್ರ ಶಕ್ತಿಯಿಂದ ಆನೆಯನ್ನು ಒಂದು ಕ್ಷಣದಲ್ಲಿ ಮಾಯಮಾಡಿದಾಗ, ಮಂತ್ರಗಳು ಇಲ್ಲ ಎಂಬ ನಾಸ್ತಿಕರ ವಾದವನ್ನು ಖಂಡಿಸಿ ಮಂತ್ರಗಳು ಇವೆ ಎಂಬ ಆಸ್ತಿಕರ ವಾದವನ್ನು ಸಮರ್ಥಿಸಬಹುದು. ಈ ವಿಧವಾಗಿ ಎರಡು ವರ್ಗಗಳಲ್ಲಿಯೂ ಸ್ವಲ್ಪಸತ್ಯ. ಸ್ವಲ್ಪ ಅಸತ್ಯ ಅಡಗಿವೆ. ಎರಡು ವರ್ಗಗಳಲ್ಲಿಯೂ ಒಂದೇ ವಿಧವಾಗಿ ಸತ್ಯಾಸತ್ಯಗಳು ಅಡಗಿರುವುದರಿಂದ, ಕೊನೆಗೆ ಎರಡು ಒಂದೇ ಫಲಿತಾಂಶದೊಳಗೆ ಹೋಗುವುದರಿಂದ, ಸಮಾಜಕ್ಕೆ ಸಂಶಯವಿಲ್ಲದ ಮಾರ್ಗವನ್ನು ತೋರಿಸದೆ, ಸಂಶಯವನ್ನೇ ಕಲ್ಪಿಸಿ, ಯಾವ ಕಡೆ ತೀರ್ಮಾನಿಸಿಕೊಳ್ಳದೆ ಸಂದಿಗ್ದದಲ್ಲಿ ಹಾಕುವುದರಿಂದ, ಎರಡು ವಿಧಾನಗಳು ಒಂದೇ ವರ್ಗಕ್ಕೆ ಸೇರಿರುವವೇ ಎಂದು ಹೇಳಬಹುದು.

ಹಸುವಿಗೂ ಹುಲಿಗೂ ಸರಿಹೋಗುವುದಿಲ್ಲವೆಂದು, ಆಹಾರದಲ್ಲಿಯೂ, ಜೀವನ ವಿಧಾನದಲ್ಲಿಯೂ ವಿಭಿನ್ನತೆಯನ್ನು ಹೊಂದಿವೆ ಎಂದು ಎಲ್ಲರಿಗೂ ತಿಳಿದಿದೆ. ಇವುಗಳನ್ನು ಬೇರೆ ಬೇರೆ ವರ್ಗಗಳೆಂದು ಹೇಳಬಹುದು. ಒಂದು

ಕಡೆ ಹಸು ಕಾಣಿಸಿದೆ, ಮತ್ತೊಂದು ಕಡೆ ಹುಲಿ ಕಾಣಿಸಿದೆ, ಹಸುವನ್ನು ಹುಲಿಯನ್ನು ವರ್ಗಬೇದದಿಂದ ನೋಡಿದರೂ, ಹುಲಿ ನಿಜವಾಗಲು ಹುಲಿಯಲ್ಲವೆಂದು, ಅದು ಸಹ ಹುಲಿಚರ್ಮ ಹೊದ್ದುಕೊಂಡ ಹಸು ಎಂದು ತಿಳಿದಾಗ ಎರಡು ಒಂದೇ ವರ್ಗಕ್ಕೆ ಸಂಬಂಧಿಸಿದ ಹಸುಗಳೆಂದು ಹೇಳಬಹುದು.

ಗೋವುಗಳು, ಗೋಮುಖ ವ್ಯಾಘ್ರಗಳು ಎರಡು ಒಂದೇ ಎಂದು ತಿಳಿದಂತೆ ಪ್ರಸ್ತುತ ಈಗ ಸಮಾಜದಲ್ಲಿ ಇರುವವರು ಆಸ್ತಿಕರಾ, ನಾಸ್ತಿಕರಾ ಎಂದು ಮತ್ತು ಆಸ್ತಿಕರಂತೆ ಇರುವ ನಾಸ್ತಿಕರಾ ಎಂದು ಯೋಚಿಸಿ ನೋಡಬೇಕಾದ ಅವಶ್ಯಕತೆ ಇದೆ. ಯಾರು ಆಸ್ತಿಕರು? ಯಾರು ನಾಸ್ತಿಕರು? ಈಗಿರುವ ಎರಡು ಗುಂಪುಗಳನ್ನು ಕೂಡಿಸಿ ನಾಸ್ತಿಕರು ಅನ್ನಬೇಕಾ? ಇಲ್ಲವೆ ಆಸ್ತಿಕರನ್ನಬೇಕಾ? ಇವುಗಳಿಗೆ ಉತ್ತರ ಬೇಕೆಂದರೆ, ನಾಸ್ತಿಕರಿಗೂ ಆಸ್ತಿಕರಿಗೂ ನಿರ್ವಚನೆ ಹೇಳಿಕೊಂಡು, ಆ ನಿರ್ವಚನೆಯ ಪ್ರಕಾರ ಈಗಿರುವವರು ಯಾರೋ ತೀರ್ಮಾನಿಸಿ ಹೇಳಬಹುದು.

ಕಂಪ್ಯೂಟರ್‌ನಲ್ಲಿ ಹಾರ್ಡ್‌ವೇರ್, ಸಾಫ್ಟ್‌ವೇರ್ ಇರುವುದು ಎಲ್ಲರಿಗೂ ತಿಳಿದಿರುವ ವಿಷಯವೇ. ಹಾರ್ಡ್‌ವೇರ್ ಇಲ್ಲದೆ ಸಾಫ್ಟ್‌ವೇರ್ ಆಗಲಿ, ಸಾಫ್ಟ್‌ವೇರ್ ಇಲ್ಲದ ಹಾರ್ಡ್‌ವೇರ್ ಆಗಲಿ ಇರುವ ಕಂಪ್ಯೂಟರ್‌ಗಳು ಇಲ್ಲ. ಹಾಗೆಯೇ ಸೂಕ್ಷ್ಮ, ಸ್ಥೂಲವು ಇಲ್ಲದ ಜಗತ್ತೆ ಇಲ್ಲ. ಸೂಕ್ಷ್ಮ ಇಲ್ಲದ ಮನುಷ್ಯನಾಗಲಿ, ಹಾಗೆಯೇ ಸ್ಥೂಲವಿಲ್ಲದ ಮನುಷ್ಯನಾಗಲಿ ಜಗತ್ತಿನಲ್ಲಿ ಇಲ್ಲ. ಕಂಪ್ಯೂಟರ್‌ಗೆ ಹಾರ್ಡ್‌ವೇರ್ ಸಾಫ್ಟ್‌ವೇರ್ ಇದ್ದಂತೆ, ಮಾನವನಿಗೆ ತಪ್ಪದೆ ಸ್ಥೂಲ, ಸೂಕ್ಷ್ಮಗಳಿರಬೇಕಾಗಿದ್ದೇ. ಮನುಷ್ಯನಿಗೆ ಸ್ಥೂಲವಾಗಿರುವುದು ಶರೀರವು, ಸೂಕ್ಷ್ಮವಾಗಿರುವುದು ಆತ್ಮ. ಸ್ಥೂಲವಾಗಿರುವ ಶರೀರವು 24 ಭಾಗಗಳಾಗಿರುವಾಗ, ಸೂಕ್ಷ್ಮವಾಗಿರುವ ಆತ್ಮ ಮೂರು ಭಾಗಗಳಾಗಿ ಇದೆ. ಸ್ಥೂಲ ಎಂದರೆ ಕಾಣಿಸುವುದು, ಸೂಕ್ಷ್ಮ ಎಂದರೆ ಕಾಣದಿರುವುದು ಎಂದು ಅರ್ಥ. ಹಾಗೆಯೇ ಪ್ರಪಂಚದಲ್ಲಿ ಕಾಣಿಸುವ ಧನ ಇರುವಂತೆ, ಕಾಣಿಸದ ಧನವೂ ಸಹ ಇದೆ.

ಕಾಣಿಸುವ ಆಸ್ತಿಯನ್ನನುಸರಿಸಿ ಆಸ್ತಿಪರನು ಎನ್ನುವಂತೆ, ಕಾಣಿಸದ ಧನವನ್ನು ಅನುಸರಿಸಿ ಸಹ ಆಸ್ತಿಪರನು ಎನ್ನಬಹುದು.

ಪೂರ್ವದಲ್ಲಿ ಕಾಣಿಸದ ಆಸ್ತಿಯಾದ ಜ್ಞಾನಧನವನ್ನನುಸರಿಸಿ ಜ್ಞಾನಧನ ಇರುವವನನ್ನು **"ಆಸ್ತಿಕನು"**ಎಂದೂ, ಜ್ಞಾನಧನ ಇಲ್ಲದವನನ್ನು **"ನಾಸ್ತಿಕನು"** ಎಂದೂ ಸಂಬೋಧಿಸುತ್ತಿದ್ದರು. ಕಾಣಿಸುವ ಧನವನ್ನು ಕಳ್ಳರು ದೋಚಿ ಕೊಳ್ಳಬಹುದು, ಹುಳುಗಳು ತಿಂದುಹಾಕಬಹುದು. ಆದರೆ ಜ್ಞಾನಧನವನ್ನು ಕಳ್ಳರು ದೋಚಿಕೊಳ್ಳುವುದಿಲ್ಲ, ಹುಳುಗಳು ತಿನ್ನುವುದಿಲ್ಲ. ಪ್ರಪಂಚಧನ ಅಶಾಶ್ವತವಾದುದು, ಮರಣಿಸಿದಾಗ ಹಿಂದೆ ಬರುವುದಿಲ್ಲ. ಜ್ಞಾನಧನ ಶಾಶ್ವತವಾದದು, ಮರಣಿಸಿದ ಜೀವಿಯ ಜೊತೆಹೋಗುವುದು. ಆದ್ದರಿಂದ ಪೂರ್ವದಲ್ಲಿ ಜ್ಞಾನಧನ ವಿಷಯಗಳಲ್ಲಿಯೇ ಆಸ್ತಿಕನು, ನಾಸ್ತಿಕನು ಎಂದು ಮನುಷ್ಯನನ್ನು ಹಿರಿಯರು ನಿರ್ಣಯಿಸುತ್ತಿದ್ದರು. ಈ ಲೆಕ್ಕ ಪ್ರಕಾರ ಪ್ರಪಂಚದಲ್ಲಿ ಯಾರು ನಾಸ್ತಿಕರು, ಯಾರು ಆಸ್ತಿಕರು ಎಂದು ಲೆಕ್ಕಿಸಿದರೆ, ದೇವರು ಇಲ್ಲ ಅನ್ನುವವರಿಗೆ ಹೇಗೂ ಜ್ಞಾನಧನ ಇರುವುದಿಲ್ಲ, ಆದ್ದರಿಂದ ಅಂತಹವನನ್ನು ನಾಸ್ತಿಕನೆಂದು ಸುಲಭವಾಗಿ ಹೇಳಬಹುದು. ಅವರು ಸಹ ನಾವು ನಾಸ್ತಿಕರೆ ಎಂದೂ ಒಪ್ಪಿಕೊಳ್ಳುತ್ತಾರೆ. ಜ್ಞಾನಧನ ಹೊಂದಿದ ಆಸ್ತಿಕರನ್ನು ಗುರುತಿಸುವು ದರಲ್ಲಿಯೇ ದೊಡ್ಡ ಸಮಸ್ಯೆ ಇದೆ. ದೇವರನ್ನು ಇಲ್ಲ ಎನ್ನುವವರು ಪ್ರತ್ಯಕ್ಷವಾಗಿ ಕಾಣಿಸುವ ಹಸುವಿನಂತಹವರು. ಇನ್ನು ಹುಲಿಚರ್ಮ ಹೊದ್ದಿಕೊಂಡ ಹಸುಗಳನ್ನು ಗುರುತಿಸುವುದರಲ್ಲಿಯೇ ದೊಡ್ಡ ಸಮಸ್ಯೆ ಇದೆ. ಕಾಣಿಸದ ದೇವರನ್ನು ನೋಡಿದ್ದೇವೆ ಎಂದು ಹೇಳುವ ಪೀಠಾಧಿಪತಿಗಳು, ಯಾರಿಗೂ ತಿಳಿಯದ ದೇವರನ್ನು ನಿಮಗೆ ತೋರಿಸುತ್ತೇವೆ ಎನ್ನುವ ಗುರುಗಳು, ಆಗಾಗ ನಮ್ಮ ಶರೀರದೊಳಗೆ ದೇವರೆ ಬಂದು ನಿಮ್ಮ ಜೊತೆ ಮಾತನಾಡಿ, ಆತನ ದೃಷ್ಟಿಯನ್ನು ನಿಮ್ಮ ಮೇಲೆ ಬೀರುತ್ತಾನೆಂದು ಪ್ರಚಾರ ಮಾಡುತ್ತಿರುವ ಕೆಲವು ಸಮಾಜಗಳ ಸ್ವಾಮಿಗಳು, ಸ್ವಾಮಿನೀಯರು, ನಾವೇ ಸಾಕ್ಷಾತ್ತು ದೇವರುಗಳೆಂದು ಹೇಳಿಕೊಳ್ಳುವ ಬಾಬಾಗಳು, ಎಷ್ಟೋ ಜನ ಭಕ್ತರು ಆಸ್ತಿಕರೆನ್ನುವ ಹೆಸರಿನಲ್ಲಿ ಚಲಾವಣೆ ಆಗುತ್ತಿದ್ದಾರೆ. ಜ್ಞಾನಧನವನ್ನು ಅನುಸರಿಸಿ ನೋಡಿದರೆ ನೂರಕ್ಕೆ ತೊಂಬ

ತ್ತೊಂಬತ್ತು ಜನರೂ ಸಹ ಜ್ಞಾನಧನ ಇಲ್ಲದವರೆ ಆಗಿರುವುದರಿಂದ ಎಲ್ಲರನ್ನು ಆಸ್ತಿ ಇಲ್ಲದವರೆಂದು ನಾಸ್ತಿಕರೆಂದು ಹೇಳಬಹುದು. ಆಸ್ತಿ ಇಲ್ಲದಿದ್ದರೂ ಆಸ್ತಿಕರು ಎಂದು ಹೆಸರು ಇಟ್ಟುಕೊಂಡವರು, ಹುಲಿ ಅಲ್ಲದಿದ್ದರೂ, ಹುಲಿಚರ್ಮ ಹೊದ್ದುಕೊಂಡು ಮೇಲಕ್ಕೆ ಮಾತ್ರ ಹುಲಿಯಂತೆ ಕಾಣಿಸುತ್ತಿರುವ ಹಸುಗಳೇ ಎಂದು ಹೇಳಬಹುದು. ಸಾವಿರಕ್ಕೆ ಒಬ್ಬರು ಸಹ ಅಪರೂಪವಾಗಿ ಜ್ಞಾನಧನ ಇರುವವರು ಇರುವ ಈ ಕಾಲದಲ್ಲಿ ಹೇತುಪದ್ಧತಿ ಪ್ರಕಾರ ಬಹಳ ಮಟ್ಟಿಗೆ ಎಲ್ಲರೂ ನಾಸ್ತಿಕರೇ. ಸ್ವಾಮಿಗಳನ್ನು, ಗುರುಗಳನ್ನು, ಪೀಠಾಧಿಪತಿಗಳನ್ನು, ಬಾಬಾಗಳನ್ನು, ದೊಡ್ಡ ಭಕ್ತರನ್ನು ನಾಸ್ತಿಕರೆನ್ನುವುದರಲ್ಲಿ ಸ್ವಲ್ಪ ವಿಚಿತ್ರವಾಗಿದ್ದರು ಇರುವ ವಾಸ್ತವ ಅಷ್ಟೇ. ನಿಜವಾದ ಜ್ಞಾನಧನ ಇರುವವರು ಲಕ್ಷಕ್ಕೊಬ್ಬರೋ, ಕೋಟಿಗೊಬ್ಬರೋ ಇರಬಹುದು. ಅಂತಹವರನ್ನು ಮಾತ್ರವೇ ಆಸ್ತಿಕರು ಎನ್ನುವುದರಲ್ಲಿ ಅರ್ಥ ಇದೆ.

"ದೇವರೇ ಇಲ್ಲ ಎನ್ನುವವರು ಕಾಣಿಸುವ ನಾಸ್ತಿಕರಾದರೆ, ದೇವರು ಇದ್ದಾನೆಂದು ಹೇಳುತ್ತಿರುವ ಕಾಣಿಸದ ನಾಸ್ತಿಕರು ಎಷ್ಟೋ ಜನ ಆಸ್ತಿಕರಾಗಿ ಇದ್ದಾರೆಂದು ನೀವು ಹೇಳುತ್ತಿದ್ದೀರಾ ದೊಡ್ಡ ದೊಡ್ಡ ಸ್ವಾಮಿಗಳನ್ನು, ಬಾಬಾಗಳನ್ನು, ಪಿಠಾಧಿಪತಿಗಳನ್ನು, ಗುರುಗಳನ್ನು ಯಾವ ಆಧಾರದಿಂದ ನಾಸ್ತಿಕರು ಅನ್ನುತ್ತಿದ್ದೀರಾ? ಅವರ ಹತ್ತಿರ ಜ್ಞಾನಧನ ಇಲ್ಲ ಎನ್ನುವುದಕ್ಕೆ ಆಧಾರವೇನೆಂದು" ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ಬದುಕಿರುವ ಮನುಷ್ಯರಿಗೆ ದೇವರು ತಿಳಿಯುವುದಿಲ್ಲ ಎನ್ನುವ ಮಾತನ್ನು ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಹೇಳಬಹುದು. ದೇವರು ಮನುಷ್ಯನಿಗೆ ತಿಳಿಯದಿದ್ದರೂ, ದೇವರ ಜ್ಞಾನವನ್ನು ಮಾನವನಿಗೋಸ್ಕರ ಶಾಸ್ತ್ರಬದ್ಧವಾಗಿ ದೇವರೇ ತಿಳಿಸಿದ್ದಾನೆ. ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆಯಲ್ಲಿ ದೈವ ಜ್ಞಾನವು ಸಂಪೂರ್ಣವಾಗಿ ತಿಳಿಸಲ್ಪಟ್ಟಿರುವಾಗ, ಅದನ್ನು ವಿಸ್ಮರಿಸಿ ಶಾಸ್ತ್ರಬದ್ಧತೆ ಇಲ್ಲದಂತೆ ಮಾತನಾಡುವವರ ಹತ್ತಿರ ಜ್ಞಾನಧನ ಇಲ್ಲವೆಂದು ಹೇಳಬಹುದು. ವೇದಗಳು ಗುಣಗಳ ಪ್ರತಿರೂಪಗಳೆಂದು, ಅವುಗಳನ್ನು ಬಿಟ್ಟರೆ ಸರಿಯಾದ ಮಾರ್ಗವು

ಲಭಿಸುತ್ತದೆ ಎಂದು **ಗೀತೆಯಲ್ಲಿ ಹೇಳಿದ ದೈವವಾಕ್ಯವನ್ನು ಮರೆತು, ವೇದಗಳಿಗೆ ಪ್ರಾಧಾನ್ಯತೆ ಕೊಡುವವರ ಹತ್ತಿರ ಜ್ಞಾನಧನ ಇರುವುದಿಲ್ಲವೆಂದು ಹೇಳಬಹುದು. ಬಾಹ್ಯಯಜ್ಞಗಳಿಂದ, ವೇದಗಳ ಅಧ್ಯಯನದಿಂದ, ದಾನಗಳಿಂದ, ತಪಸ್ಸುಗಳಿಂದ ದೇವರು ತಿಳಿಯುವುದಕ್ಕೆ ಸಾಧ್ಯ ಆಗುವುದಿಲ್ಲವೆಂದು ಗೀತೆಯಲ್ಲಿ ಹೇಳಿರುವಾಗ ಅವುಗಳನ್ನೇ ದೊಡ್ಡದಾಗಿ ತಿಳಿದು ಯಜ್ಞಗಳನ್ನು ಮಾಡುವ ಸ್ವಾಮಿಗಳು, ವೇದಪಠನೆ ಮಾಡುವ ಪೀಠಾಧಿಪತಿಗಳು, ತಪಸ್ಸುಗಳು ಮಾಡುವ ಗುರುಗಳು, ದಾನಗಳು ಮಾಡುವ ಭಕ್ತಾಗ್ರಗಣ್ಯರು ದಾರಿ ತಪ್ಪಿದವರಲ್ಲವೆ!** ನಿಜವಾಗಿ ಜ್ಞಾನಧನ ಇಲ್ಲದ ನಾಸ್ತಿಕರು ಅಲ್ಲವೆ? ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ವಿರುದ್ಧವಾಗಿ ಬೋಧಿಸುವವರು, ಪ್ರಜೆಗಳಿಗೆ ಸಂಶಯಗಳು ತೀರಿಸದವರು, ಹೇತುಬದ್ಧವಾಗಿ ಉತ್ತರ ಕೊಡದವರು ಎಷ್ಟು ಆಸ್ತಿಕರಾಗಿ ಕಾಣಿಸಿದರು ನಿಜವಾಗಿ ನಾಸ್ತಿಕರು ಅಲ್ಲವೆ? ದೇವರು ಇಲ್ಲ ಎಂದು ಹೇಳುವವರು ಮಾತ್ರವೇ ನಾಸ್ತಿಕರೆಂದು, ದೇವರು ಇದ್ದಾನೆಂದು ಹೇಳುವವರು ಆಸ್ತಿಕರೆಂದು ಹೇಳುವುದು ತಪ್ಪು. ಜ್ಞಾನ ಧನ ಇಲ್ಲದವರೆಲ್ಲರೂ ಆಸ್ತಿಕರು ಅಲ್ಲವೆಂದು, ನಾಸ್ತಿಕರೇ ಎಂದು ಹೇಳುವುದು ಸರಿಯಾದ ಮಾತು. ಜ್ಞಾನಧನ ಇಲ್ಲದವರು ದೊಡ್ಡ ಸ್ವಾಮೀಜಿಗಳಾದರು ನಾಸ್ತಿಕರೇ ಎಂದು ಹೇಳಬಹುದು.

ಕಾಣಿಸುವ ಧನವನ್ನು ಅನುಸರಿಸಿ ಇವನು ಧನಿಕನು. ಇವನು ಧನಿಕನಲ್ಲವೆಂದು ಹೇಳಬಹುದು. ಕಾಣಿಸದ ಜ್ಞಾನಧನವನ್ನನುಸರಿಸಿ ಇವನು ನಾಸ್ತಿಕನು, ಇವನು ಆಸ್ತಿಕನೆಂದು ಹೇಗೆ ಗುರುತಿಸಬಹುದು ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾನಧಾನ ಏನೆಂದರೆ! ಕಾಣಿಸದ ಜ್ಞಾನಧನದ ಬಗ್ಗೆ ತಿಳಿಯಬೇಕೆಂದರೆ ದೇವರ ಧರ್ಮಗಳು ತಿಳಿಯಬೇಕು. ದೇವರ ಧರ್ಮಗಳು ಒಂದು ಭಗವದ್ಗೀತೆಯಲ್ಲಿಯೇ ಇವೆ. ಗೀತೆಯಲ್ಲಿನ ಧರ್ಮಗಳನ್ನು ತಿಳಿದಾಗಲೇ ಅದರಲ್ಲಿ ಹೇಳಿದ ಜ್ಞಾನಾಗ್ನಿ ವಿಷಯತಿಳಿಯುತ್ತದೆ. ಗೀತೆಯಲ್ಲಿ ಅನೇಕ ಸಂದರ್ಭಗಳಲ್ಲಿ ಹೇಳಲಾದ ಜ್ಞಾನಾಗ್ನಿಯೇ ನಾವು ಅಂದುಕೊಳ್ಳುವ ಕಾಣಿಸದ ಜ್ಞಾನಧನ. ಜ್ಞಾನವೆಂಬ ಅಗ್ನಿ ಇರುವವನೇ ನಿಜವಾದ ಸನ್ಯಾಸಿ, ನಿಜವಾದ ಯೋಗಿ ಎಂದು ಗೀತೆಯಲ್ಲಿ ಹೇಳಲ್ಪಟ್ಟಿದೆ. **ಜ್ಞಾನಾಗ್ನಿ ಇಲ್ಲದವನು ಎಷ್ಟು**

**ದೊಡ್ಡ ಸ್ವಾಮಿ ಆದರೂ ಅಸತ್ಯವಾದ ಸನ್ಯಾಸಿ, ಅಸತ್ಯವಾದ ಯೋಗಿ ಎಂದೇ ಹೇಳಬಹುದು.**

ಪ್ರಪಂಚ ಧನ ಮನುಷ್ಯನಿಗೆ ಅವಶ್ಯಕತೆಗಳನ್ನು ಪೂರೈಸಿ ಸುಖಗಳನ್ನು ಕೊಡಬಲ್ಲದು. ಹಾಗೆಯೇ ಜ್ಞಾನಧನವು ಮನುಷ್ಯನ ಕರ್ಮಗಳನ್ನು ಪೂರೈಸಿ ಮೋಕ್ಷವನ್ನು ಕೊಡಬಲ್ಲದು. ಇದರ ಬಗ್ಗೆ **"ಜ್ಞಾನಾಗ್ನಿ ಸರ್ವ ಕರ್ಮನಾಂ ಭಸ್ಮ ಸಾತ್"** ಎಂದು ಗೀತೆಯಲ್ಲಿ ಹೇಳಲಾಗಿದೆ. ಗೀತೆಯಲ್ಲಿನ ಧರ್ಮಗಳನ್ನು ತಿಳಿದು ಆಚರಿಸುವವನ ಹತ್ತಿರ ತಪ್ಪದೆ ಜ್ಞಾನಧನ ಇರುತ್ತದೆ. ಗೀತೆಧರ್ಮಗಳಿಗೆ ವಿರುದ್ಧವಾಗಿ ನಡೆಯುವವರೆಲ್ಲರ ಹತ್ತಿರ ಜ್ಞಾನಧನ ಇರುವುದಿಲ್ಲವೆಂದು ಹೇಳಬಹುದು. "ಗೀತೆಯನ್ನು ಎಷ್ಟೋ ಸ್ವಾಮಿಗಳು, ಪೀಠಾಧಿಪತಿಗಳು, ಗುರುಗಳು ಎಷ್ಟೋ ಸ್ವಚ್ಛವಾಗಿ ಬೋಧಿಸುತ್ತಿದ್ದಾರೆ ಅಲ್ಲವೆ! ಅವರನ್ನು ಸಹ ನೀವು ನಾಸ್ತಿಕರು ಅನ್ನುತ್ತೀರಲ್ಲವೆ! ಅವರಿಗೂ ಧರ್ಮಗಳು ತಿಳಿದಿಲ್ಲ ಅನ್ನುತ್ತೀರಾ" ಎಂದು ಕೆಲವರು ಕೇಳಬಹುದು. ಅದಕ್ಕೆ ನಾವು ಹೇಳುವುದು ಏನೆಂದರೆ! ಗೀತೆಯನ್ನು ಓದಿದಷ್ಟು ಮಾತ್ರಕ್ಕೆ ಧರ್ಮಗಳು ಅವರಿಗೆ ತಿಳಿದಿದೆಂದುಕೊಳ್ಳುವುದು ತಪ್ಪಾಗುತ್ತದೆ. ಅವರು ಧರ್ಮಗಳು ತಿಳಿದವರಾದರೆ ಬಾಹ್ಯಯಜ್ಞಗಳು ಹೇಗೆ ಮಾಡುತ್ತಾರೆ? ದೈವ ಧರ್ಮಗಳು ತಿಳಿದವರಾದರೆ ವೇದಾಧ್ಯಯನ ಏಕೆ ಮಾಡುತ್ತಿದ್ದಾರೆ? ಅನ್ಯದೇವತಾರಾಧನೆ ಮಾಡುವವರು ಧರ್ಮಗಳು ತಿಳಿದವರು ಹೇಗೆ ಆಗುತ್ತಾರೆ? ಧರ್ಮಗಳು ತಿಳಿಯದೆ ಜ್ಞಾನಧನ ಇರುವುದಿಲ್ಲ. ಧರ್ಮಗಳು ತಿಳಿದವನು ಧರ್ಮಗಳ ಪ್ರಕಾರವೇ ನಡೆದುಕೊಳ್ಳುವವನಾಗಿ ಪ್ರತ್ಯೇಕವಾಗಿ ಕಾಣಿಸುತ್ತಾನೆ. ಅಂತಹವನನ್ನೇ ಜ್ಞಾನಧನ ಇರುವವನೆಂದು, ಅವನನ್ನೇ ಆಸ್ತಿಕನೆಂದು ಹೇಳಬಹುದು. ಜ್ಞಾನಧನ ಇರಬೇಕೆಂದರೆ ದೈವಧರ್ಮಗಳು ಇರಬೇಕು. ಧರ್ಮಗಳು ಆಚರಣೆಯಲ್ಲಿ ಕಾಣಿಸುವವು, ಆದ್ದರಿಂದ ಆಚರಣೆ ಯಿಂದ ಜ್ಞಾನಧನ ಇರುವವನನ್ನು ಕಂಡುಹಿಡಿಯಬಹುದು. **ಧರ್ಮಾಚರಣೆ ಹೊಂದಿದವನು ಸಮಾಜದಲ್ಲಿ ಸ್ವಾಮಿ ಆಗದಿದ್ದರೂ ನಿಜವಾದ ಸ್ವಾಮಿಯೇ. ಅವನು ನಿಜವಾದ ಆಸ್ತಿಕನೇ. ಹಾಗೆಯೇ ಧರ್ಮಾಚರಣೆ ಇಲ್ಲದವನು**

**ಸ್ವಾಮಿಯಾದರು ಅವನು ನಿಜವಾದ ಸ್ವಾಮಿ ಅಲ್ಲ, ಅವನು ನಿಜವಾದ ನಾಸ್ತಿಕನೇ.**

ನೀವು ನಾಸ್ತಿಕರನ್ನು, ಆಸ್ತಿಕರನ್ನು ತಿಳಿಯಬೇಕೆಂದರೆ ಮೊದಲು ಗೀತೆಯಲ್ಲಿನ ನಿಗೂಢವಾದ ಧರ್ಮಗಳು ತಿಳಿದುಕೊಳ್ಳಿ. ಅವುಗಳನ್ನು ತಿಳಿದು ಆಚರಿಸಿ ನೀವೂ ಸಹ ಜ್ಞಾನಧನ ಇರುವ ಆಸ್ತಿಕರಾಗಿ ಬದಲಾಗಬಹುದು. ಅಷ್ಟೇ ಅಲ್ಲದೆ ದೇಶದಲ್ಲಿ ಆಸ್ತಿಕರ ಮುಸುಗಿನಲ್ಲಿ ಇರುವವರನ್ನೂ ಸಹ ನಾಸ್ತಿಕರಾಗಿ ಗುರುತಿಸಬಹುದು. ದೇವರು ಇಲ್ಲ ಎನ್ನುವವರಿಗೆ ನಾಸ್ತಿಕಮುದ್ರೆ ಹಾಕಿ ತಾವು ಆಸ್ತಿಕರೆಂದುಕೊಳ್ಳುವವರಿಗೆ ಕಣ್ತೆರಸಬಹುದು. ದೈವಧರ್ಮವು ತಿಳಿದು ಆಚರಿಸದವನು ಎಂದಿಗೂ ಆಸ್ತಿಕನಾಗುವುದಿಲ್ಲವೆಂದು, ನಾಸ್ತಿಕನಾಗಿರ ಬೇಕಾಗಿದ್ದೇ ಎಂದು ಪ್ರಕಟಿಸಿ ಹೇಳಬಹುದು.

ಈಗಿನ ಕಾಲದಲ್ಲಿ ಕೆಲವರು ಹೇತುವಾದಿಗಳು, ತಮ್ಮ ಸುತ್ತಲೂ ತಮ್ಮ ನಿರ್ಣಯವು ಸರಿಯಾದುದೆಂಬ ಒಂದು ಬೇಲಿಯನ್ನು ತಯಾರುಮಾಡಿ ಕೊಂಡು, ಆಧ್ಯಾತ್ಮಿಕವೆನ್ನುವುದು ಭ್ರಮೆ ಎನ್ನುತ್ತಿದ್ದಾರೆ. ಆಧ್ಯಾತ್ಮಿಕವನ್ನು ನಂಬಿಕೆ ಗಳಿಂದ ಕೂಡಿಕೊಂಡ ಚಿಕ್ಕ ಸಮಸ್ಯೆ ಎಂದು ಹೊಡೆದುಹಾಕುತ್ತಿದ್ದಾರೆ. ಆಧ್ಯಾತ್ಮಿಕವು ಸೈನ್ಸ್‌ಗೆ ಸಂಬಂಧಿಸಿದ ವಿಷಯವೆ ಅಲ್ಲ ಎನ್ನುತ್ತಿದ್ದಾರೆ. ಅಂತಹ ವರೆಲ್ಲರೂ ತಮ್ಮ ನಿರ್ಣಯವನ್ನು ಪುನರಾಲೋಚಿಸಿ ಕೊಳ್ಳಬೇಕಾಗಿದೆ ಎಂದು ನಾವು ಕೋರುತ್ತಿದ್ದೇವೆ. ಏಕೆಂದರೆ! ಇಲ್ಲಿಯವರೆಗೂ ಆಸ್ತಿಕತ್ವದಲ್ಲಿ ಎಷ್ಟೋ ಕಲ್ಪಿತಗಳು ಪುರಾಣ ವಿಷಯಗಳನ್ನು ನೋಡಿ ಅವರು ಹಾಗೆ ಹೇಳಿರಬಹುದು. ಆದರೆ ಯೋಚಿಸಿ ನೋಡಿದರೆ ಆಧ್ಯಾತ್ಮಿಕವೆ ಒಂದು ದೊಡ್ಡ ಸೈನ್ಸು. ಆಧ್ಯಾತ್ಮಿಕವು ಆರು ಶಾಸ್ತ್ರಗಳಲ್ಲಿಯೇ ದೊಡ್ಡದು ಮತ್ತು ಆರನೆಯದಾದ ಬ್ರಹ್ಮವಿದ್ಯಾಶಾಸ್ತ್ರ. ಶಾಸ್ತ್ರವು ಸಿದ್ಧಾಂತಗಳಿಂದ ಕೂಡಿಕೊಂಡಿದೆ, ಸಿದ್ಧಾಂತಗಳು ವಿಜ್ಞಾನ ರೂಪದಿಂದಲೇ ಇರುತ್ತವೆ. ಆದ್ದರಿಂದ ಸಿದ್ಧಾಂತಪರವಾದ ಆಧ್ಯಾತ್ಮಿಕವನ್ನು ಸೈನ್ಸ್ ಎಂದೇ ಹೇಳಬಹುದು. ಈಗಿರುವ ಆಸ್ತಿಕರು ಯಜ್ಞಗಳನ್ನು ಹೊರಗೆ ಆಚರಿಸಿ ಏನೋ ನಡೆಯುತ್ತದೆ ಎಂದು ಹೇಳುವುದು ಮೂಢ ನಂಬಿಕೆಗಳಿಂದ

ಕೂಡಿಕೊಂಡ ಕೆಲಸ. ಅದನ್ನೇ ಹೇತುವಾದಿಗಳು ಖಂಡಿಸ ಬಹುದು. ಅದೇ ಯಜ್ಞಗಳು ಶರೀರದಲ್ಲಿ ನಿತ್ಯವು ನಡೆಯುತ್ತವೆ ಎಂದು ಹೇಳಬಹುದು, ದ್ರವ್ಯಯಜ್ಞವು ಎಲ್ಲರಲ್ಲಿ ನಿತ್ಯನಡೆಯುತ್ತದೆಂದು ಹೇಳುವುದು ಸಿದ್ಧಾಂತ ಪರವಾದ ಶಾಸ್ತ್ರವಚನ. ದ್ರವ್ಯಯಜ್ಞವು ಹೇಗೆ ನಡೆಯುತ್ತಿದೆ ಎಂದು ಹೇತುವಾದಿಗಳು ಯೋಚಿಸಬೇಕಾಗಿದೆ. ನಿಜವಾಗಲು ನಡೆಯುತ್ತಿರುವ ದ್ರವ್ಯಯಜ್ಞವನ್ನು ವಿಜ್ಞಾನದಿಂದ ಕೂಡಿಕೊಂಡ ವಿಷಯವೆಂದು ತಿಳಿಯದೆ ಮೂಢನಂಬಿಕೆ ಎಂದು ಹೊಡೆದು ಹಾಕುವುದು, ನಮಗೆ ತಿಳಿಯದ ಸೈನ್ಸನ್ನು ಸೈನ್ಸೇ ಅಲ್ಲ ಎನ್ನು ವಂತಿರುತ್ತದೆ. ಆದ್ದರಿಂದ ವಿಜ್ಞಾನದಿಂದ ಕೂಡಿಕೊಂಡ ಹೇತುವಾದಿಗಳು ಸ್ವಲ್ಪ ಪರಿಶೋಧನೆ ಮಾಡಿ ನಿರೂಪಣಾತ್ಮಕವಾಗಿ ಖಂಡಿಸುವುದು ಒಳ್ಳೆಯದು. ಹಾಗಲ್ಲದೆ ನಂಬಿಕೆಯಾಗಿರುತ್ತದೆ ಎಂದು ಮೂಢವಾಗಿ ನಂಬಿ ಹೊಡೆದುಹಾಕುವುದು ಹೇತುವಾದಿಗಳಲ್ಲಿನ ಮೂಢನಂಬಿಕೆಯಾಗುತ್ತದೆ. ಕುರುಡರಂತೆ ಶಾಸ್ತ್ರಬದ್ಧತೆ ಇಲ್ಲದೆ ಖಂಡಿಸುವು ದರಿಂದ ಹೇತುವಾದಿ ಗಳೆಂದುಕೊಳ್ಳುವವರೂ ಸಹ ಒಂದು ವಿಧವಾಗಿ ಮೂಡನಂಬಿಕೆ ಇರುವವರೇ ಆಗುತ್ತಾರೆ. **ಒಂದು ಸತ್ಯವಾದ ವಿಷಯವನ್ನು ಶಾಸ್ತ್ರೀಯವಾಗಿ ಸಮರ್ಥಿಸುವವರು ಒಂದು ಅಸತ್ಯ ವಿಷಯವನ್ನು ಶಾಸ್ತ್ರೀಯವಾಗಿಯೇ ಖಂಡಿಸಬೇಕು.** ಆದ್ದರಿಂದ ಆಧ್ಯಾತ್ಮಿಕವನ್ನು ಸೈನ್ಸು ಅಲ್ಲ ಎಂದು ಹೊಡೆದುಹಾಕದೆ ಆಧ್ಯಾತ್ಮಿಕದಿಂದಲೇ ಸೈನ್ಸ್ ಹುಟ್ಟಿದೆ ಎಂದು ತಿಳಿಯಬೇಕು. ಧರ್ಮ ಎನ್ನುವುದು ಆಧ್ಯಾತ್ಮಿಕದಿಂದಲೆ ಹುಟ್ಟಿದೆ, ಸೈನ್ಸ್ ಪ್ರಕಾರ ಒಂದೊಂದು ವಸ್ತುವು ಒಂದೊಂದು ಧರ್ಮವನ್ನು ಹೊಂದಿದೆ ಎಂದು ಹೇಳುತ್ತಿದ್ದೇವೆ. ಸಿದ್ಧಾಂತವು ಆಧ್ಯಾತ್ಮಿಕದಿಂದ ಹುಟ್ಟಿದೆ, ಸೈನ್ಸ್ ಪ್ರಕಾರ ಸಿದ್ಧಾಂತಗಳಿಂದ ಕೂಡಿಕೊಂಡಿರುವುದೇ ಶಾಸ್ತ್ರ ಎನ್ನುತ್ತಿದ್ದೇವೆ. ಆಧ್ಯಾತ್ಮಿಕ ದಿಂದಲೇ ಶಾಸ್ತ್ರ ಹುಟ್ಟಿದೆ, ಸೈನ್ಸಿನ ಪ್ರಕಾರ ನಿರೂಪಣೆಗೆ ಬರುವುದನ್ನೇ ಶಾಸ್ತ್ರ ಎನ್ನುತ್ತಿದ್ದೇವೆ.

ಭೂಮಿಗಿರುವ ಆಕರ್ಷಣಾ ಶಕ್ತಿ ಭೂಮಿಯ **ಧರ್ಮ** ಆಗುತ್ತದೆ. ಆ ಧರ್ಮ ವನ್ನು ಕಂಡುಹಿಡಿದಾಗ ಅದು **ಸಿದ್ಧಾಂತವಾಗುತ್ತದೆ.** ಆ ಸಿದ್ದಾಂತವು ಆಚರಣೆ ರೂಪವಾಗಿ ನಡೆಯುವುದು **ಶಾಸ್ತ್ರವಾಗುತ್ತದೆ.** ಧರ್ಮವು ಸೃಷ್ಟಿ

ಆದಿಯಿಂದ ಇದೆ. ಕಂಡುಹಿಡಿದಾಗ ಸಿದ್ಧಾಂತಗಳಾಗುತ್ತವೆ. ಆಚರಿಸಿದಾಗ ಶಾಸ್ತ್ರಗಳಾಗುತ್ತವೆ. ಭೂಮ್ಯಾಕರ್ಷಣ ಶಕ್ತಿ ಮೊದಲಿಂದ ಇರುವ ಧರ್ಮವೇ. ಅದನ್ನು ನ್ಯೂಟನ್ ಎಂಬ ವ್ಯಕ್ತಿ ಕಂಡುಹಿಡಿದಾಗ ಅದು ಸಿದ್ಧಾಂತವಾಗಿದೆ. ಆ ಸಿದ್ಧಾಂತವು ಆಚರಣೆಯಾಗಿ ನಡೆಯುತ್ತಿದೆ. ಆದ್ದರಿಂದಲೇ ಶಾಸ್ತ್ರವು ನಡದೆ ನಡೆಯುತ್ತದೆ ಎಂದು, ಶಾಸ್ತ್ರದ ಮೊದಲ ಹೆಸರು ಶಾಪವೆಂದು, ಶಾಪ ತಪ್ಪದೆ ನಡೆದು ತೀರುತ್ತದೆಂದು, ಶಾಪದ ರೂಪಾಂತರವೇ ಶಾಸ್ತ್ರವೆಂದು ತಿಳಿಯಬೇಕು. ಹೇತುವಾದಿಗಳು ಜಾಗ್ರತೆಯಾಗಿ ಒಂದು ವಿಷಯವನ್ನು ಅನೇಕ ಕೋನಗಳಿಂದ ಪರಿಶೋಧಿಸಿ ನೋಡಿದನಂತರವೇ ಮೂಢನಂಬಿಕೆಯಾ, ಶಾಸ್ತ್ರಬದ್ಧವಾ ಎಂದು ತೀರ್ಮಾನಿಸಿ ಹೇಳಬೇಕು. ಮತ್ತೊಂದು ಮುಖ್ಯವಾದ ವಿಷಯ ಏನೆಂದರೆ. **ನಂಬಿಕೆ ಎಂಬುವುದು ಒಂದು ಆರೋಪಣೆಯಂತಹದ್ದು. ಆರೋಪಣೆ ನಿಜವಾಗಬಹುದು ಇಲ್ಲವೇ ಅಸತ್ಯವಾಗಬಹುದು. ನಂಬಿಕೆಯೂ ಸಹ ಸತ್ಯ ವಾಗಬಹುದು, ಅಸತ್ಯವಾಗಬಹುದು. ನಂಬಿಕೆ ಅಸತ್ಯವಾದಾಗ ಮೂಢನಂಬಿಕೆ ಯಾಗುತ್ತದೆ, ಸತ್ಯವಾದಾಗ ಶಾಸ್ತ್ರ ಸಮ್ಮತವಾಗುತ್ತದೆ.** ಅಷ್ಟೇಯಾಗಲಿ ನಂಬಿಕೆ ಅನ್ನುತ್ತಲೇ ಹೊಡೆದುಹಾಕಬಾರದು. ನಂಬಿಕೆ ಮೇಲೆ ಎಷ್ಟೋ ಸತ್ಯಗಳು ಆಧಾರಪಟ್ಟಿವೆ. ಉದಾಹರಣೆಗೆ ತಾಯಿ, ತಂದೆ ನಂಬಿಕೆ ಆದಾಗ ಅದು ಸತ್ಯ. ಅದನ್ನೇ ಶಾಸ್ತ್ರಬದ್ದತೆ ಎನ್ನುತ್ತಿದ್ದಾರೆ. ಹಾಗೆ ಕುಲ, ಮತ ಎನ್ನುವವು ನಂಬಿಕೆಯಾದರೂ ಅವುಗಳನ್ನು ಪರಿಶೋಧಿಸಿ ನೋಡಿದರೆ ಅಸತ್ಯವು, ಆದಕಾರಣ ಅವುಗಳನ್ನು ಮೂಢನಂಬಿಕೆ ಎನ್ನಬಹುದು. ನಂಬಿಕೆ ಮೂಢನಂಬಿಕೆಯೂ ಆಗಬಹುದು, ಹೇತುಬದ್ದವೂ ಆಗಬಹುದು. ಆದ್ದರಿಂದ ನಂಬಿಕೆ ಅಂದ ಕೂಡಲೇ ಅದನ್ನು ಹೊಡೆದುಹಾಕಬೇಡಿ, ಪರಿಶೋಧಿಸಿ ನಿರೂಪಣೆಗೆ ಬಾರದ ವಿಷಯವಾದಾಗ ಅದನ್ನು ಖಂಡಿಸಬಹುದು ಎಂದು ತಿಳಿಸುತ್ತಿದ್ದೇವೆ.

ಮಾನ ಎಂದರೆ ಅಳತೆ ಎಂದು ಅರ್ಥ. ಒಂದು ಪದಾರ್ಥದ ನಿರ್ದಿಷ್ಟ ಅಳತೆಯನ್ನು ಪರಿಮಾಣ ಎನ್ನುತ್ತಿದ್ದೇವೆ. ಕಾಲದ ಬಗ್ಗೆ ಹೇಳುವಾಗ ಕಾಲಮಾನ ಎನ್ನುತ್ತಿದ್ದೇವೆ. ಕಾಲಮಾನ ಎಂದರೆ ಕಾಲದ ಅಳತೆ ಎಂದು ಅರ್ಥ. ಹಾಗೆಯೇ ಮನುಷ್ಯನ ವಿಷಯದಲ್ಲಿ ನೋಡಿದರೆ ಮನುಷ್ಯನಿಗೆ ಒಂದು

ಪದವಿ ಇಲ್ಲವೆ ದೊಡ್ಡಸ್ತಿಕೆ ಎನ್ನುವವು ಇರುತ್ತವೆ. ಪದವಿ ಅಥವಾ ದೊಡ್ಡಸ್ತಿಕೆ ಎನ್ನುವವು ಒಬ್ಬೊಬ್ಬರಿಗೆ ಒಂದೊಂದು ಅಳತೆಗಳಲ್ಲಿ ಇರುತ್ತದೆ. ಮನುಷ್ಯನಿಗೂ ಮನುಷ್ಯನಿಗೂ ಮಧ್ಯ ದೊಡ್ಡತನ ಇಲ್ಲವೆ ಬೆಲೆದಲ್ಲಿ ಸ್ವಲ್ಪವಾದರೂ ವ್ಯತ್ಯಾಸ ಇರುತ್ತದೆ. ಯಾವುದಾದರೂ ಒಂದು ವಿಷಯದಲ್ಲಿ ತನ್ನ ಗೌರವಕ್ಕೆ ಧಕ್ಕೆ ಉಂಟಾದಾಗ ಅಲ್ಲಿ ನನ್ನ ಮಾನ ಹೋಯಿತು ಅನ್ನುತ್ತೇವೆ. ಇಲ್ಲಿಯೂ ಸಹ ಮಾನ ಹೋಗಿದೆ ಎಂದರೆ ಮಾನವನ ಗೌರವಕ್ಕಿರುವ ಅಳತೆ ಕಡಿಮೆಯಾಗಿದೆ ಎಂದು ಅರ್ಥ. ಈ ವಿಧವಾಗಿ ಅನೇಕ ವಿಷಯಗಳಲ್ಲಿ ಮಾನ ಎನ್ನುವ ಪದ ಉಪಯೋಗಪಡುತ್ತಿದೆ. ಒಬ್ಬ ವ್ಯಕ್ತಿಗಿರುವ ಗೌರವವನ್ನನುಸರಿಸಿ ಆತನಿಗೆ ಬೇರೆಯವನು ಕೊಡುವ ಗೌರವವನ್ನು ಮರ್ಯಾದೆ ಎನ್ನುತ್ತಿದ್ದೇವೆ. ಮಾನ ಮರ್ಯಾದೆ ಇಲ್ಲದ ಮನುಷ್ಯರೂ ಸಹ ಜಗತ್ತಿನಲ್ಲಿ ಇದ್ದಾರೆ. ಮಾನ ಇದ್ದರೇ ಮರ್ಯಾದೆ ಇರುತ್ತದೆ. ಮಾನ ಇಲ್ಲದಿದ್ದರೆ ಮರ್ಯಾದೆಯೂ ಸಹ ಇರುವುದಿಲ್ಲ. ಮಾನದ ಸ್ಥಿತಿ ಗತಿಗಳನ್ನು ವಿವರವಾಗಿ ತಿಳಿದುಕೊಂಡರೆ ಇನ್ನೂ ಈ ವಿಧವಾಗಿ ಇವೆ.

ಒಬ್ಬ ಮನುಷ್ಯನಿಗಿರುವ ಮಾನಕ್ಕಿಂತ ಹೆಚ್ಚಾಗಿ ಹೋಲಿಸಿಕೊಂಡು ಬೇರೆಯವರು ಗೌರವಿಸುವುದನ್ನು **"ಅಭಿಮಾನ"** ಎನ್ನುತ್ತೇವೆ. ಹಾಗೆಯೇ ಒಬ್ಬನಿಗಿರುವ ಮಾನವನ್ನು ಗುರುತಿಸದಿದ್ದಾಗಾಗಲಿ ಅಥವಾ ಮಾನ ಇದೆಯೋ ಇಲ್ಲವೋ ತಿಳಿಯದಿರುವಾಗ ಅವನ ಬಗ್ಗೆ ಉಂಟಾಗುವುದನ್ನು **"ಅನುಮಾನ"** ಎನ್ನುತ್ತೇವೆ. ನಿರ್ಧಿಷ್ಟವಾಗಿ ತಿಳಿಯುವ ಅಳತೆಯನ್ನು **"ಪರಿಮಾಣ"** ಎನ್ನುತ್ತಿದ್ದೇವೆ. ಇರುವುದಕ್ಕಿಂತ ಹೆಚ್ಚಾಗಿ ಹೋಲಿಸಿಕೊಳ್ಳುವುದನ್ನು **ಅಭಿಮಾನ** ಎನ್ನುತ್ತಿದ್ದೇವೆ, ಇರುವುದಕ್ಕಿಂತ ಕಡಿಮೆ ಹೋಲಿಸಿಕೊಳ್ಳುವುದನ್ನು **ಅವಮಾನ** ಎನ್ನುತ್ತೇವೆ. ಮಾನದ ಬಗ್ಗೆ ಅಂದಾಜು ಇಲ್ಲದಿರುವಾಗ ಅದನ್ನು **ಅನುಮಾನ** ಎನ್ನುತ್ತಿದ್ದೇವೆ. ಈ ಮೂರು ವಿಧಗಳಾದ ಮಾನಗಳು ಒಬ್ಬ ವ್ಯಕ್ತಿ ಬಗ್ಗೆಯಾಗಲಿ ಒಂದು ವಸ್ತುವಿನ ಬಗ್ಗೆಯಾಗಲಿ ಇರುವುದು ಸಹಜ. ಇಲ್ಲಿ ಕೆಲವರು ಒಂದು ಪ್ರಶ್ನೆ

ಕೇಳಬಹುದು ಅದೇನೆಂದರೆ! ಮನುಷ್ಯನ ನಡುವಳಿಕೆಯನ್ನನುಸರಿಸಿ, ಪ್ರವರ್ತನೆಯನ್ನನುಸರಿಸಿ ಅವಮಾನ, ಅಭಿಮಾನ, ಅನುಮಾನ ಇರಬಹುದಾಗಲಿ ವಸ್ತುವಿಗೆ ಹೇಗೆ ಇರುತ್ತದೆ ಎಂದು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ!

ಮಾನ, ಅವಮಾನ, ಅಭಿಮಾನ, ಅನುಮಾನಗಳು ಜೀವ ಇಲ್ಲದಿರುವ ವುಗಳಿಗೂ ಸಹ ಇರುತ್ತದೆ ಎಂದು ತಿಳಿಯುತ್ತಿದೆ. ಉದಾಹರಣೆಗೆ ಒಂದು ಆಕಾರ ಇರುವ ಪ್ರತಿಮೆಯನ್ನು ಕುರಿತು ನೋಡಿದರೆ, ಸಮಾಜದಲ್ಲಿ ಪ್ರತಿಮೆಗೆ ಸ್ವಲ್ಪ ಬೆಲೆ ಇರುತ್ತದೆ, ಅದನ್ನೇ ಆ ಪ್ರತಿಮೆಗೆ ಇರುವ ಮಾನ ಎನ್ನಬಹುದು. ಆ ಪ್ರತಿಮೆಯನ್ನು ಕೆಲವರು ಗೌರವಿಸಿ ಪೂಜಿಸುವುದರಿಂದ ಅದರ ಬಗ್ಗೆ ಕೆಲವರಿಗೆ ಮರ್ಯಾದೆ ಇದೆಯೆಂದು ಹೇಳಬಹುದು. 1) ಪ್ರತಿಮೆಗಳ ಬಗ್ಗೆ ಮುಸ್ಲಿಮರು ಕಡಿಮೆ ಲೆಕ್ಕಚಾರದಿಂದ ವಿರುದ್ಧವಾಗಿರುತ್ತಾರೆ ಆದುದರಿಂದ ಅವರ ಹತ್ತಿರ ಪ್ರತಿಮೆಗೆ ಅವಮಾನ ಇದೆಯೆಂದು ಹೇಳಬಹುದು. 2) ಕೆಲವರು ಆ ಪ್ರತಿಮೆಯನ್ನೇ ಬಹಳ ದೊಡ್ಡದಾಗಿ ಆರಾಧಿಸುವುದರಿಂದ ಅದರ ಬಗ್ಗೆ ಅವರಿಗೆ ಬಹಳ ಅಭಿಮಾನ ಇದೆ ಎಂದೂ ಸಹ ಹೇಳಬಹುದು. 3) ಪ್ರತಿಮೆಗಳ ಬೆಲೆಯನ್ನು ಸ್ವಲ್ಪವೂ ಅವಗಾಹನೆ ಮಾಡಿಕೊಳ್ಳದೆ, ಅವುಗಳ ವಿಷಯ ಸ್ವಲ್ಪವೂ ತಿಳಿಯದೆ, ಯಾವ ಕಡೆ ನಿರ್ಣಯ ಮಾಡಿಕೊಳ್ಳದೆ, ಮೊದಲೇ ತೆಗೆದುಹಾಕುವ ನಾಸ್ತಿಕರಲ್ಲಿ ಪ್ರತಿಮೆಗಳ ಬಗ್ಗೆ ಅನುಮಾನವೇ ಉಳಿದಿದೆ ಎಂದು ಹೇಳಬಹುದು. ಈ ವಿಧವಾಗಿಯೇ ಜೀವವಿರುವ ಮಾನವರನ್ನು ಅವರಿಗೆ ಇರುವ ಗೌರವವನ್ನು ಲೆಕ್ಕಹಾಕಿಕೊಳ್ಳದೆ ಅನುಮಾನಿಸುವುದು ಸಹ ನಡೆಯುತ್ತಿದೆ. ಹಾಗೆ ಗೌರವವನ್ನು ಕಡಿಮೆ ಲೆಕ್ಕಹಾಕಿಕೊಳ್ಳುವುದರಿಂದ ಅವಮಾನಿಸುವುದು, ಹೆಚ್ಚಾಗಿ ಹೋಲಿಸಿಕೊಳ್ಳುವುದರಿಂದ ಅಭಿಮಾನಿಸುವುದು ಸಹ ನಡೆಯುತ್ತಿದೆ. ಇದನ್ನನುಸರಿಸಿ ನೋಡಿದರೆ ಬೇರೆಯವರ ಬೆಲೆಯನ್ನು (ಮಾನವನ್ನು) ಗ್ರಹಿಸುವುದರಲ್ಲಿನ ವಿಧಾನಗಳಿಂದಲೇ ಅವಮಾನಗಳು, ಅಭಿಮಾನ, ಅನುಮಾನ ಗಳು ಇವೆ ಎಂದು ನಿರೂಪಣೆಗೆ ಬರುತ್ತಿದೆ.

ತನಗಿಂತ ಬೇರೆಯಾಗಿರುವ ಪ್ರಾಣವಿರುವ, ಪ್ರಾಣ ಇಲ್ಲದವುಗಳಿಗೆ ಕೊಡುವ ಅಳತೆ ಇರುವ ಗೌರವವನ್ನನುಸರಿಸಿ ಮನುಷ್ಯರನ್ನು ಮೂರು

ವಿಧಗಳಾಗಿ ವಿಭಜಿಸಬಹುದು. ಒಂದು ಅವಮಾನಿಸುವವರು, ಎರಡು ಅಭಿಮಾನಿಸುವವರು, ಮೂರು ಅನುಮಾನಿಸುವವರು. ಈ ಮೂವರನ್ನೇ ದೂಷಣ, ಭೂಷಣ, ತಿರಸ್ಕಾರರು ಎನ್ನುತ್ತಿದ್ದೇವೆ. ಅವಮಾನಿಸುವವರನ್ನು ದೂಷಣರೆಂದು, ಅಭಿಮಾನಿಸುವವರನ್ನು ಭೂಷಣರೆಂದು, ಅನುಮಾನಿಸುವ ವರನ್ನು ತಿರಸ್ಕಾರರೆಂದು ಹೇಳಬಹುದು. ಇನ್ನೊಂದು ವಿಧವಾಗಿ, ಅನುಮಾನಿಸುವವರನ್ನು ದೂಷಿಸುವವರನ್ನು ನಾಸ್ತಿಕರೆಂದು, ಅಭಿಮಾನಿಸುವ ವರನ್ನು ಕೀರ್ತಿಸಿ ಆರಾಧಿಸುವವರನ್ನು ಆಸ್ತಿಕರೆಂದು, ಅನುಮಾನಿಸಿ ತಿರಸ್ಕರಿಸುವವರನ್ನು ವಿಮರ್ಶಿಸುವವರನ್ನು ಹೇತುವಾದಿಗಳೆಂದು ಲೆಕ್ಕಿಸಬಹುದು. ಇವರನ್ನು ಮನುಷ್ಯರ ವಿಷಯದಲ್ಲಿ ದೂಷಣ, ಭೂಷಣ, ತಿರಸ್ಕಾರರೆಂದು ಹೇಳಿದರೂ ದೇವರ ವಿಷಯಕ್ಕೆ ಬರುವುದರೊಳಗೆ ನಾಸ್ತಿಕರು, ಆಸ್ತಿಕರು, (ವಿಮರ್ಶಕರು) ಹೇತುವಾದಿಗಳೆಂದು ಹೇಳಬಹುದು. ನಾಸ್ತಿಕರಿಗೂ ಆಸ್ತಿಕರಿಗೂ ಮಧ್ಯದಲ್ಲಿರುವವರು ಹೇತುವಾದಿಗಳು. ಏಕೆಂದರೆ ದೇವರ ವಿಷಯದಲ್ಲಿ ಹೇತುಬದ್ಧತೆಯನ್ನು ತಿಳಿದಾಗ ಹೇತುವಾದರು ಆಸ್ತಿಕರಾಗಿ ಬದಲಾಗಬಹುದು. ಹಾಗೆಯೇ ಹೇತುಬದ್ಧತೆಯನ್ನು ತಿಳಿಯದಿರುವಾಗ ನಾಸ್ತಿಕರಾಗಿ ಬದಲಾಗ ಬಹುದು.

ಒಬ್ಬ ಮನುಷ್ಯ ಇದ್ದಾಗಲೇ ಅವನ ಬಗ್ಗೆ ಅಭಿಮಾನ, ಅವಮಾನ, ಅನುಮಾನ ಇರುತ್ತದೆ. ಹಾಗೆಯೇ ದೇವರು ಇದ್ದಾಗಲೇ ಆತನ ಬಗ್ಗೆ ಆಸ್ತಿಕ, ನಾಸ್ತಿಕ, ಹೇತುವಾದ ಇರುತ್ತದೆ. ವಿಶ್ವದಲ್ಲಿ ಕಾಣಿಸುವ ಮನುಷ್ಯನು ಇದ್ದಾನೆ, ಹಾಗೆ ಕಾಣಿಸದ ದೇವರು ಇದ್ದಾನೆ. ಈಗಿನ ಕಾಲದಲ್ಲಿ ಮನುಷ್ಯ ದೇವರ ಬಗ್ಗೆ ತನ್ನ ಆಸ್ತಿಕತ್ವವನ್ನು, ನಾಸ್ತಿಕತ್ವವನ್ನು ಹೇಗೆ ಹೊಂದಿದ್ದಾನೋ ವಿವರಿಸಿಕೊಳ್ಳೋಣ. ಪ್ರಸ್ತುತ ಕಾಲದಲ್ಲಿ ದೇವರ ಸಮಾಚಾರ ಏನೊ, ದೇವರ್ಯಾರೊ, ದೇವರ ಘನತೆ ಏನೊ, ದೇವರು ಎಂದರೆ ಅರ್ಥ ಏನೊ, ದೇವರ ಪರಿಮಾಣವೇನೋ ತಿಳಿಯದವರೆಲ್ಲರೂ ಆಸ್ತಿಕರಾಗಿ ಚಲಾವಣೆ ಆಗುತ್ತಿದ್ದಾರೆ. ದೇವರ ಸ್ಥಾನದಲ್ಲಿ ಎಷ್ಟೋ ಜನ ದೇವತೆಗಳನ್ನು ಸೃಷ್ಟಿಸಿಕೊಂಡು ಅವರನ್ನೇ ದೇವರೆಂದು ಹೇಳಿಕೊಳ್ಳುವುದರಿಂದ ಅಸಲು ದೇವರ್ಯಾರೋ

ಅರ್ಥವಾಗದೆ ಹೋಗಿದೆ. ಷಟ್ ಶಾಸ್ತ್ರಗಳಲ್ಲಿ ಬ್ರಹ್ಮವಿದ್ಯೆ ಶಾಸ್ತ್ರವಾಗಿ ನಿಂತಿರುವುದು ಭಗವದ್ಗೀತೆ ಎಂದು ತಿಳಿಯದವರು ಎಷ್ಟೋ ಜನ ಸ್ವಾಮಿಗಳಾಗಿ ಚಲಾವಣೆಯಾಗುತ್ತಾ, ಗೀತೆಯನ್ನು ಪ್ರಮಾಣವಾಗಿ ತೆಗೆದುಕೊಳ್ಳದೆ ಹೋಗಿರುವುದರಿಂದ ಅಸಲಾದ ದೇವರ ವಿಷಯವು ತಿಳಿಯದಂತೆ ಹೋಗಿದೆ. ದೈವ ವಿಷಯಗಳು ಶಾಸ್ತ್ರಬದ್ಧತೆ ಹೊಂದಿದ ಜ್ಞಾನವೆಂದು ತಿಳಿಯದವರು, ಅನೇಕ ವಿಧಗಳಾಗಿ ಅವರವರ ಬೋಧನೆಗಳನ್ನು ಪ್ರಚಾರ ಮಾಡಿಕೊಳ್ಳುವುದರಿಂದ, ದೇವರು ಎನ್ನುವ ಪದಕ್ಕೆ ಅರ್ಥ ಇಲ್ಲದೆ ಹೋಗಿದೆ. ಒಬ್ಬೊಬ್ಬ ಗುರು ಒಂದೊಂದು ವಿಧವಾಗಿ ಬೋಧಿಸುವುದರಿಂದ ಒಬ್ಬರಿಗೊಬ್ಬರಿಗೆ ಅನುಸಂಧಾನ ಇಲ್ಲದಂತೆ ಹೋಗಿದೆ. ಎಷ್ಟೋ ಜನ ಸ್ವಾಮಿಗಳು ಅವರಿಗೆ ಇಷ್ಟ ಬಂದಂತೆ, ಅವರಿಗೆ ತೋಚಿದ ವಿಧವಾಗಿ ಶಾಸ್ತ್ರಬದ್ಧತೆ ಇದೆಯಾ ಇಲ್ಲವಾ ಎಂದು ನೋಡದೆ ಹೇಳುವುದರಿಂದ, ದೈವತ್ವಕ್ಕೆ ನಿರ್ದಿಷ್ಟವಾದ ಪ್ರಮಾಣವು ತಿಳಿಯದಂತೆ ಹೋಗಿದೆ. **ಜ್ಞಾನ ಎನ್ನುವ ಹೆಸರಿನಲ್ಲಿ ಅಜ್ಞಾನವು, ಸ್ವಾಮಿಗಳು ಎನ್ನುವ ಹೆಸರಿನಲ್ಲಿ ದೈವ ವಿರುದ್ಧವಾದ ಮಾಯೆ ಪ್ರತಿನಿಧಿಗಳು ಇದ್ದಾರೆಂದು ಬಹಳ ಜನರಿಗೆ ತಿಳಿದಿಲ್ಲ**. ಮಾಯೆಗೆ ಪ್ರತಿರೂಪಗಳಾಗಿ ದೈವತ್ವ ಎನ್ನುವ ಹೆಸರಿನಲ್ಲಿ ಮಾಯ ತತ್ವವನ್ನು ಬೋಧಿಸುವವರು, ಆಸ್ತಿಕರೆಂದು ಹೆಸರು ಇಟ್ಟುಕೊಂಡರೂ ಅವರು ದೇವರ ಆಸ್ತಿ ಇಲ್ಲದ ನಾಸ್ತಿಕರೆ.

ಆಲೋಚನಾ ಶಕ್ತಿ ಇರುವ ಕೆಲವರು ಶಾಸ್ತ್ರಸಮ್ಮತವಲ್ಲದ ಲೋಪ ಭೂಯಿಷ್ಟವಾದ ಆಸ್ತಿಕತ್ವವನ್ನು ನೋಡಿ ಇದೇನಾ ದೈವತ್ವವು? ಯಾರು ದೇವರು ಎಂದು ಪ್ರಶ್ನಿಸಿಕೊಂಡು ಅವರ ಪ್ರಶ್ನೆಗಳಿಗೆ ಪ್ರತ್ಯಕ್ಷವಾಗಿರುವ ಆಸ್ತಿಕರಲ್ಲಿ ಉತ್ತರ ಇಲ್ಲವೆಂದು ಅವರಷ್ಟಕ್ಕವರು ಮುದ್ರೆಹಾಕಿಕೊಂಡು, ದೇವರೇ ಇಲ್ಲವೆಂದು ನಾವು ನಾಸ್ತಿಕರು ಎಂದುಕೊಳ್ಳುತ್ತಿದ್ದಾರೆ. ಆಸ್ತಿಕತ್ವ ಎಂದರೆ ಈಗಿರುವ ಪದ್ಧತಿಯೇನಾ ಎಂದು ನಾಸ್ತಿಕರು ಯೋಚಿಸುತ್ತಿಲ್ಲ. ಈಗಿರುವವರೆಲ್ಲರೂ ಮೇಲ್ನೋಟಕ್ಕೆ ಆಸ್ತಿಕರೆಂದು ಹೆಸರು ಇಟ್ಟುಕೊಂಡರು ತಮ್ಮಂತೆ ನಾಸ್ತಿಕರೆ ಎಂದು, ಅವರು ಆಚರಿಸುತ್ತಿರುವುದು ಆಸ್ತಿಕತ್ವವು ಅಲ್ಲವೆಂದು ತಿಳಿಯದಂತಿದ್ದಾರೆ. ಆಸ್ತಿಕನು ಎಂದರೆ ನಿರ್ದಿಷ್ಟವಾದ ಅರ್ಥ ಏನಾದರು ಇದೆಯೇನೋ ಎಂದು ಆಲೋ

ಚಿಸದಂತೆ, ಸ್ವಾಮಿಗಳನ್ನು ಭಕ್ತರನ್ನು ಆಸ್ತಿಕರೆಂದುಕೊಳ್ಳುವುದು ನಾಸ್ತಿಕರ ತಪ್ಪಾಗುತ್ತದೆ. ದೇವರೊಬ್ಬನು ಇದ್ದಾನೆಂದು ತಿಳಿದಾಗಲೇ ಆತನಿಗೆ ಗೌರವ ಇರುತ್ತದೆ. ಮಾನವರು ಆತನ ಬೆಲೆಯನ್ನು ತಿಳಿದುಕೊಂಡಾಗಲೇ ಆತನಿಗೆ ಮರ್ಯಾದೆ ಇರುತ್ತದೆ. ಮಾನ ಇದ್ದಾಗಲೇ ಮರ್ಯಾದೆ ಇರುತ್ತದೆ ಎಂಬ ಸೂತ್ರದ ಪ್ರಕಾರ ದೇವರ ದೊಡ್ಡತನ ತಿಳಿದಾಗಲೇ ಆತನ ಮೇಲೆ ಅಭಿಮಾನ ಇರುತ್ತದೆ. ಆತನ ಬಗ್ಗೆ ತಿಳಿಯದೆ, ಆತನ ಹೆಸರಿನ ಮೇಲೆ ತಮಗೆ ಇಷ್ಟಬಂದವರನ್ನು ದೇವರುಗಳಾಗಿ ಹೋಲಿಸಿಕೊಂಡಾಗ ಅಸಲಾದ ದೇವರ ಮೇಲೆ ಧ್ಯಾಸವೇ ಇರುವುದಿಲ್ಲ ಅಲ್ಲವೆ! ದೇವರ ಬಗ್ಗೆ ತಿಳಿಯದ ಆಸ್ತಿಕರು ಜ್ಞಾನಧನ ಇಲ್ಲದವರೆ ಆದ್ದರಿಂದ ಅವರೂ ಸಹ ನಾಸ್ತಿಕರೆ. ಒಂದು ವಿಧವಾಗಿ ಆಸ್ತಿಕರು ನಾಸ್ತಿಕರು ಒಂದೇ ಗುಂಪಿಗೆ ಸೇರಿದವರೇ, ಎಂದರೆ ಜ್ಞಾನಧನ ಇಲ್ಲದವರೆ. ಒಬ್ಬರೇನೋ ಮಣ್ಣನ್ನು ಚೀಲದಲ್ಲಿ ತುಂಬಿಕೊಂಡು ಧನವೆಂದು ಹರ್ಷಿಸುತ್ತಾ ಆಸ್ತಿಕರೆಂದು ಹೆಸರಿಟ್ಟುಕೊಂಡ ನಾಸ್ತಿಕರು. ಮತ್ತೊಬ್ಬರೇನೋ ಖಾಲಿ ಚೀಲವನ್ನು ಹಿಡಿದುಕೊಂಡು ನಮ್ಮ ಹತ್ತಿರ ಧನವಿಲ್ಲ, ಅದು ನಮಗೆ ಬೇಡ ಎನ್ನುವವರು ನಾಸ್ತಿಕರು. ಈ ವಿಧವಾಗಿ ಆಸ್ತಿಕರು ನಾಸ್ತಿಕರು ಒಂದೇ ಗುಂಪಿಗೆ ಸೇರಿರುವವರಾದರೆ, ಹೇತುವಾದಿಗಳು ಸ್ವಲ್ಪ ವಿಭಿನ್ನವಾಗಿದ್ದಾರೆ.

ಹೇತುವಾದಿಗಳು ಪ್ರತಿಯೊಂದು ವಿಷಯವನ್ನು ವಿಜ್ಞಾನದೊಂದಿಗೆ (ಸೈನ್ಸ್ ಜೊತೆ) ಮುಡಿಹಾಕುತ್ತಾ, ತಮಗೆ ತಿಳಿದಿರುವುದು ಮಾತ್ರವೇ ವಿಜ್ಞಾನ ಅನ್ನುತ್ತಾ, ತಮಗೆ ತಿಳಿಯದಿರುವುದು ವಿಜ್ಞಾನವೆ ಅಲ್ಲವೆನ್ನುತ್ತಿದ್ದಾರೆ. ದೇವರ ವಿಷಯಕ್ಕೆ ಬಂದರೆ ನಾಸ್ತಿಕರಂತೆ ಅಲ್ಲದೆ ಸೈನ್ಸ್ ಪ್ರಕಾರವಾದರೆ ಒಪ್ಪಿಕೊಳ್ಳುತ್ತೇವೆ. ಸೈನ್ಸ್ ಪ್ರಕಾರ ಅಲ್ಲದಿರುವುದನ್ನು ಒಪ್ಪಿಕೊಳ್ಳುವುದಿಲ್ಲ ಎಂದು ಹೇಳುತ್ತಿದ್ದಾರೆ. ಕೊನೆಗೆ ಆಧ್ಯಾತ್ಮಿಕವು, ದೇವರು ಸೈನ್ಸ್ ಅಲ್ಲವೇ ಅಲ್ಲ. ಕೇವಲ ನಂಬಿಕೆ ಮೇಲೆ ಆಧಾರಪಟ್ಟಿರುವ ವಿಷಯಗಳೆಂದು ಹೊಡೆದುಹಾಕುತ್ತಿದ್ದಾರೆ. ಮುಖ್ಯವಾಗಿ ದೇವರನ್ನು ಸೈನ್ಸ್ ಪ್ರಕಾರ ನಿರೂಪಿಸಿದರೆ ಒಪ್ಪಿಕೊಳ್ಳುತ್ತೇವೆಂದು, ಹಾಗೆ ನಮ್ಮನ್ನು ಯಾರು ಒಪ್ಪಿಸಲಾರರೆನ್ನುತ್ತಿದ್ದಾರೆ. ಆದರೆ ಹೇತುವಾದಿಗಳು ಸೈನ್ಸ್ ಪ್ರಕಾರ ದೇವರು ಇಲ್ಲ ಎಂದು ಒಪ್ಪಿಸಬಲ್ಲೆವಾ ಎಂದು ಆಲೋಚಿಸಲಿಲ್ಲ. ಒಂದು

ವಿಧವಾಗಿ ಈಗಿನ ಆಸ್ತಿಕರು, ಹೇತುವಾದಿಗಳನ್ನು ಒಪ್ಪಿಸಲಾರದ ಮಾತು ನಿಜವೆ. ಏಕೆಂದರೆ ಆಸ್ತಿಕರಿಗೆ ಶಾಸ್ತ್ರ ಎಂದರೆ (ಸೈನ್ಸ್ ಎಂದರೆ) ಏನೊ ಗೊತ್ತಿಲ್ಲ. ಅಷ್ಟು ಮಾತ್ರಕ್ಕೆ ದೇವರು ಹೇತುಬದ್ಧನು ಅಲ್ಲವೆಂದು ಹೇತುವಾದಿಗಳು ಹೇಳುವುದು ಸರಿಯಾದ ಮಾತು ಅಲ್ಲ. ಈಗಿನ ಆಸ್ತಿಕರು ಹೇಳುವ ಪುಕ್ಕಟೆ ಪುರಾಣಗಳು ಸೈನ್ಸ್‌ಗೆ ನಿಲ್ಲುವುದಿಲ್ಲ ನಿರೂಪಣೆಗೆ ಬರುವವು ಅಲ್ಲ. ಪುರಾಣಗಳು ಹೇಳುವ ವಿಷಯಗಳ ಆಧಾರದಿಂದ ಆಧ್ಯಾತ್ಮಿಕವು, ದೇವರು ಇದ್ದಾನೆ ಎಂಬ ಮಾತು ವಿಜ್ಞಾನ (ಸೈನ್ಸ್) ಅಲ್ಲವೆಂದು ಹೇತುವಾದಿಗಳ ವಾದನೆ ಸಮಂಜಸವೇ ಅನಿಸಿದರೂ ಇಲ್ಲಿ ಕೆಲವು ಪ್ರಶ್ನೆಗಳು ಉತ್ಪನ್ನವಾಗುತ್ತವೆ. ಅವು ಏನೆಂದರೆ! ಆಸ್ತಿಕರ ಮಾತುಗಳು ನಿರೂಪಣೆಗೆ ಬಾರದ ನಂಬಿಕೆಗಳು ಮಾತ್ರವೆ ಎಂದು ಹೇಳುವ ಹೇತುವಾದಿಗಳು, ತಮ್ಮ ಪರಿಶೋಧನೆಗಳ ಮೂಲಕ ಆಧ್ಯಾತ್ಮಿಕತೆಯಲ್ಲಿನ ವಿಷಯಗಳನ್ನು ಪರಿಶೋಧಿಸಿ ಪರಿಶೋಧನೆಗೆ ತಿಳಿಯುವುದಿಲ್ಲವೆಂದು ಏಕೆ ಹೇಳಬಾರದು? ಯಾವಾಗಲು ಆಸ್ತಿಕರು ಹೇಳಿದ ಮಾತುಗಳನ್ನು ಕೇವಲ ನಂಬಿಕೆಗಳೆಂದು ಹೊಡೆದುಹಾಕುವುದು ಹೊರತು, ತಮಗೆ ತಿಳಿಯದ ಶಾಸ್ತ್ರಬದ್ಧತೆ ಏನಾದರು ಇದೆಯೆನೋ ಎಂದು ಏಕೆ ನೋಡಬಾರದು? **'ಯೋಗಶಾಸ್ತ್ರ'** ಎಂದು ಹೆಸರಿಟ್ಟಿರುವ ಭಗವದ್ಗೀತೆಯಲ್ಲಿ ವಿಷಯಗಳನ್ನು ಶಾಸ್ತ್ರಬದ್ಧವಾಗಿ ಏಕೆ ಶೋಧಿಸಬಾರದು? ಷಟ್‌ಶಾಸ್ತ್ರಗಳೆಂದು ಹೆಸರುವಾಸಿಯಾದ ಆರು ಶಾಸ್ತ್ರಗಳು, ಶಾಸ್ತ್ರಜ್ಞರು ಎಂದುಕೊಳ್ಳುವ ಹೇತುವಾದಿಗಳಿಗೆ ತಿಳಿದಿದೆಯಾ? ಶಾಸ್ತ್ರಗಳು ನಾಲ್ಕೆ ಎಂದು ಹೇಳುವುದು ಹೇತುವಾದಿಗಳಲ್ಲಿನ ಮೂಢನಂಬಿಕೆ ಅಲ್ಲವೆ! ತಮಗೆ ತಿಳಿದಿರುವವೆ ಶಾಸ್ತ್ರಗಳು ತಿಳಿಯದಿರುವವು ಶಾಸ್ತ್ರಗಳು ಅಲ್ಲ ಎನ್ನಬಹುದಾ? ಅಷ್ಟಾದಶ ಪುರಾಣಗಳನ್ನು ಖಂಡಿಸಬಹುದು, ಆದರೆ ಷಟ್ ಶಾಸ್ತ್ರಗಳನ್ನು ಹೇತುವಾದಿಗಳು ಖಂಡಿಸಬಲ್ಲರಾ? ಆರು ಶಾಸ್ತ್ರಗಳು ಒಂದಕ್ಕೊಂದು ಮುಡಿಹಾಕಲ್ಪಟ್ಟಾಗ, ಅವುಗಳ ಅನುಸಾಂಧನವನ್ನು ಸೈನ್ಸಿನ ಪ್ರಕಾರ ಅಲ್ಲ ಎನ್ನುತ್ತಾರಾ? ತಮಗೆ ಅರ್ಥವಾಗದ ಮಾತ್ರಕ್ಕೆ ಭಗವದ್ಗೀತೆಯನ್ನೇ ಕಲ್ಪಿತ ಎಂದು ಹೇಳುವ ಹೇತುವಾದಿಗಳು, ಗೀತೆಯಲ್ಲಿನ ವಿಷಯಗಳನ್ನು ವಿಜ್ಞಾನ ರೂಪವಾಗಿ ಶಾಸ್ತ್ರ ಅಲ್ಲವೆಂದು ನಿರೂಪಿಸುತ್ತೀರಾ? ತಮಗೆ ಜೀವಶಾಸ್ತ್ರ

ತಿಳಿದಿದೆ ಎನ್ನುವ ಹೇತುವಾದಿಗಳು, ಜೀವಾತ್ಮ ಎನ್ನುವ ವಿಷಯವನ್ನು ಏಕೆ ಹೊಡೆದು ಹಾಕುತ್ತಿದ್ದಾರೆ? ಎಷ್ಟೋ ವಿಷಯಗಳಿಗೆ ಪೂರ್ತಿ ಸಮಾಧಾನ ತಿಳಿಯದೆಯೇ ಯಾವುದೋ ಊಹೆಯಿಂದ ಹೇಳುವ ಹೇತುವಾದಿಗಳು ಮೂಢನಂಬಿಕೆ ಇರುವವರು ಅಲ್ಲವೆ?

ಯಾವುದೋ ಒಂದು ಭಕ್ತಿ ಇರುವವರೆಲ್ಲರೂ ನಾವು ಆಸ್ತಿಕರೆಂದು ಕೊಂಡು ಭ್ರಮಿಸುವಂತೆ, ಯಾವುವೊ ಕೆಲವು ವಿಷಯಗಳನ್ನು ವಿಜ್ಞಾನ ರೂಪವಾಗಿ ತಿಳಿದ ಮಾತ್ರಕ್ಕೆ ನಾವು ಹೇತುವಾದಿಗಳೆಂದು ಕೆಲವರು ತಪ್ಪಾಗಿ ತಿಳಿಯುತ್ತಿದ್ದಾರೆ. ನಿಜವಾದ ಆಸ್ತಿ ಏನೊ ಇಂದಿನ ಆಸ್ತಿಕರಿಗೆ ತಿಳಿಯದಂತೆ, ನಿಜವಾದ ಹೇತುಬದ್ದವು ಏನೊ ಇಂದಿನ ಹೇತುವಾದಿಗಳಿಗೂ ತಿಳಿದಿಲ್ಲ. ಇದರಿಂದ ಇಂದಿನ ಆಸ್ತಿಕರು ಆಸ್ತಿಕರು ಅಲ್ಲ, ಹಾಗೇ ಈಗಿನ ಹೇತುವಾದಿಗಳು ಹೇತುವಾದಿಗಳು ಅಲ್ಲ ವ್ಯರ್ಥವಾದಿಗಳೇ. ಈಗಿನ ಆಸ್ತಿಕರನ್ನು, ಹೇತುವಾದಿಗಳನ್ನು ಪ್ರಶ್ನಿಸುತ್ತಾ, ಶಾಸ್ತ್ರಬದ್ದವಾದ ವಿಷಯಗಳನ್ನು ತಿಳಿದಾಗಲೇ ನಿಜವಾದ ಆಸ್ತಿಕರು, ನಿಜವಾದ ಹೇತುವಾದಿಗಳು ಆಗಬಲ್ಲರೆಂದು ತಿಳಿಸುತ್ತಿದ್ದೇವೆ. ಸೃಷ್ಟಿ ಆದಿಯಲ್ಲಿ ಮೊದಲು ಹುಟ್ಟಿದ ಶಾಸ್ತ್ರ ದೈವಶಾಸ್ತ್ರ. ಅದನ್ನೇ ಬ್ರಹ್ಮವಿದ್ಯಾಶಾಸ್ತ್ರ ಮತ್ತು ಯೋಗಶಾಸ್ತ್ರ ಎಂದು ಎನ್ನುತ್ತಿದ್ದೇವೆ. ಮೊದಲು ಹುಟ್ಟಿದ ಯೋಗಶಾಸ್ತ್ರವು ದೇವರಿಗೆ ಸಂಬಂಧಿಸಿರುವುದು, ಆದ್ದರಿಂದ ಅದನ್ನು ಸ್ವತಃ ದೇವರೆ ಸೂರ್ಯ ಗ್ರಹಕ್ಕೆ ಹೇಳಿದ್ದಾನೆ. ಸೂರ್ಯಗ್ರಹವು, ಕಾಣಿಸುವುದಕ್ಕೆ ಉರಿಯುವ ಗೋಳ, ಅದು ಅದರ ಸ್ಥೂಲಾಕಾರ. ಜೀವವಿರುವ ಪ್ರತಿಯೊಂದಕ್ಕೂ ಸೂಕ್ಷ್ಮವೂ ಸಹ ಇರುತ್ತದೆ. ವಿಷಯವನ್ನು ಗ್ರಹಿಸುವುದಾದ್ದರಿಂದ ಅದನ್ನು **ಗ್ರಹ** ಎಂದಿದ್ದೇವೆ. ಆ ದಿನದ ದೈವಪ್ರೋಕ್ತವಾದ ಮೊದಲ ಶಾಸ್ತ್ರವನ್ನು ಸೂರ್ಯಗ್ರಹ ಗ್ರಹಿಸಿ ನಂತರ ಭೂಮಿ ಮೇಲಿರುವ ಮನುಷ್ಯರಿಗೆ ತಿಳಿಸಿದೆ. ಮೊದಲು ಭೂಮಿ ಮೇಲಕ್ಕೆ ಸೂರ್ಯನ ಮೂಲಕ ಬಂದಿರುವ ಶಾಸ್ತ್ರವೇ ಯೋಗಶಾಸ್ತ್ರ. ಅದೇ ಪುನಃ ದ್ವಾಪರಯುಗ ಅಂತ್ಯದಲ್ಲಿ ಶ್ರೀ ಕೃಷ್ಣ ಭಗವಂತನ ಮೂಲಕ ತಿಳಿಯಲ್ಪಟ್ಟಿದೆ. ನಂತರ ಉಳಿದ ಐದು ಶಾಸ್ತ್ರಗಳು ಮನುಷ್ಯನ ಸ್ಮೃತಿಯಿಂದ ಹೊರಬಿದ್ದಿವೆ.

ಮನುಷ್ಯನಿಂದ ಹೊರಬಿದ್ದಿರುವ ಐದು ಶಾಸ್ತ್ರಗಳು ಪ್ರಪಂಚಕ್ಕೆ ಸಂಬಂಧಿಸಿರುವವು ಮಾತ್ರವೇ. ನಂತರ ವೇದಗಳು ಉಪನಿಷತ್‌ಗಳು, ಪುರಾಣಗಳು ತಾಯಾರಾಗಿವೆ. ಶಾಸ್ತ್ರಗಳ ನಂತರ ಬಂದಿರುವ ವೇದಗಳು ಮಾನವನ ತಲೆಯಲ್ಲಿನ ಗುಣಗಳಿಗೆ ಪ್ರತೀಕಗಳಾಗಿ ನಿಂತಿವೆ. ಈ ವೇದಗಳೇ ಯೋಗಶಾಸ್ತ್ರಕ್ಕೆ ಕಾಣಿಸದ ಶತ್ರುಗಳಾಗಿ ನಿಂತಿವೆ. ದೇವರನ್ನು ವೇದಗಳ ಮುಖಾಂತರವೇ ತಿಳಿದುಕೊಳ್ಳಬಹುದು ಎಂಬ ಭ್ರಮೆಯನ್ನು ಉಂಟುಮಾಡಿ ಮಾನವನನ್ನು ಯಾಮರಿಸಿವೆ. ಮನುಷ್ಯ ದೈವ ಜನಿತವಾದ ಯೋಗಶಾಸ್ತ್ರವನ್ನು ಬಿಟ್ಟು ಪ್ರಕೃತಿ ಜನಿತವಾದ ವೇದಗಳ ಹಿಂದೆ ಬಿದ್ದಿದ್ದಾನೆ. ಪೂರ್ವಕಾಲದಿಂದ ವೇದಗಳನ್ನು ಜೀರ್ಣಿಸಿಕೊಂಡು, ಅವುಗಳಿಗಿಂತ ಮೀರಿರುವವು ಇಲ್ಲವೆಂದು, ದೈವಶಾಸ್ತ್ರವನ್ನು ವಿಸ್ಮರಿಸಿದ್ದಾರೆ. ಇಂದಿಗೂ ದೈವ ವಾಕ್ಯವಾದ ಭಗವದ್ಗೀತೆಯನ್ನು ಲೆಕ್ಕಮಾಡದೆ ವೇದಗಳನ್ನು ಪೂಜ್ಯಭಾವಗಳಾಗಿ ಇಟ್ಟುಕೊಂಡ ಎಷ್ಟೋಜನ ಸ್ವಾಮಿಜೀಗಳು, ಪೀಠಾಧಿಪತಿಗಳು, ಇದ್ದಾರೆ.

ಇಲ್ಲಿ ಒಂದು ಪ್ರಶ್ನೆ ಓದುಗರಿಗೆ ಬರಬಹುದು, ಅದು ಏನೆಂದರೆ! ವೇದಗಳಿಗಿಂತ ಮೊದಲು ಹುಟ್ಟಿರುವವು ಶಾಸ್ತ್ರಗಳು ಅಲ್ಲವೆ! ಅವುಗಳಲ್ಲಿಯೂ ಮೊದಲು ಹುಟ್ಟಿರುವುದು ಯೋಗಶಾಸ್ತ್ರವು ಅಲ್ಲವೆ! ಆ ನಂತರ ಹುಟ್ಟಿರುವವು ವೇದಗಳು ಎಂದಿದ್ದಾರೆ ಅಲ್ಲವೆ! ಅಂತಹದರಲ್ಲಿ ಮೊದಲು ಇಲ್ಲದ ವೇದಗಳನ್ನು ಕುರಿತು ಗೀತೆಯಲ್ಲಿ ಏಕೆ ಹೇಳಿದ್ದಾರೆ? ಗೀತೆಯಲ್ಲಿ ವೇದಗಳ ಪ್ರಸ್ತಾವನೆ ಬಂದಿದೆ ಆದ್ದರಿಂದ ಗೀತೆಗಿಂತ ಮೊದಲೇ ವೇದಗಳಿವೆ ಎಂದು ತಿಳಿಯುತ್ತಿದೆ ಅಲ್ಲವೆ! ಇದರಿಂದ ಗೀತೆ ಆದಿಯಲ್ಲಿ ಹುಟ್ಟಿದೆ ಎಂದು, ನಂತರ ಬಹಳ ಕಾಲಕ್ಕೆ ವೇದಗಳು ಹುಟ್ಟಿವೆ ಎಂಬ ನಿಮ್ಮ ಮಾತು ಅಸತ್ಯವಾಗುತ್ತದೆ ಅಲ್ಲವೆ! ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ವೇದಗಳು ಹುಟ್ಟುವುದಕ್ಕಿಂತ ಮೊದಲೆ ಆದಿಯಲ್ಲಿಯೇ ಯೋಗಶಾಸ್ತ್ರವಾದ ಗೀತೆ ಹುಟ್ಟಿದೆ. ಪ್ರಕೃತಿಗೆ ಸಂಬಂಧಿಸಿದ ಐದು ಶಾಸ್ತ್ರಗಳು ಹುಟ್ಟುವುದಕ್ಕಿಂತ ಮೊದಲು ಮತ್ತು ನಾಲ್ಕು ವೇದಗಳು ಹುಟ್ಟುವುದಕ್ಕಿಂತ ಮೊದಲು ಹುಟ್ಟಿರುವುದು ದೈವಶಾಸ್ತ್ರವಾದ ದೇವರಿಂದ ಹೇಳಲ್ಪಟ್ಟ ಯೋಗಶಾಸ್ತ್ರವು. ಆದಿಯಲ್ಲಿ ದೈವಪ್ರೋಕ್ತವಾದ ಶಾಸ್ತ್ರವನ್ನು

ಯೋಗಶಾಸ್ತ್ರ ಎನ್ನುತ್ತಿದ್ದರು. ಗೀತೆ ಎಂದು, ಭಗವದ್ಗೀತೆ ಎಂದು ಆ ದಿನ ಯೋಗಶಾಸ್ತ್ರಕ್ಕೆ ಹೆಸರು ಇಲ್ಲ. ಏಕೆಂದರೆ! ಆ ದಿನ ಭಗವಂತನಿಂದ ಹೇಳಲ್ಪಡಲಿಲ್ಲ ಆದ್ದರಿಂದ ಭಗವದ್ಗೀತೆ ಎಂಬ ಹೆಸರಿಲ್ಲ. ಮೊದಲು ಹೇಳಲ್ಪಟ್ಟ ಯೋಗಶಾಸ್ತ್ರದಲ್ಲಿ ವೇದಗಳ ಪ್ರಸಕ್ತಿಯೇ ಇಲ್ಲ. ಆ ದಿನ ವೇದಗಳೇ ಇಲ್ಲ, ಆದ್ದರಿಂದ ವೇದಗಳ ಪ್ರಸ್ತಾವನೆಯಿಲ್ಲ. ಆ ದಿನ ಯೋಗಶಾಸ್ತ್ರದಲ್ಲಿ ದೇವರ ವಿಷಯಗಳು ಮಾತ್ರವೆ ಇವೆ. ಅವುಗಳ ಔನ್ನತ್ಯವನ್ನು ಗ್ರಹಿಸದ ಮನುಷ್ಯರು ಕಾಲಕ್ರಮವಾಗಿ ಯೋಗಶಾಸ್ತ್ರದ ವಿಷಯಗಳನ್ನು ಬಿಟ್ಟು ವೇದಗಳ ಬಲೆಯಲ್ಲಿ ಬಿದ್ದಿದ್ದಾರೆ. ದ್ವಾಪರಯುಗ ಅಂತ್ಯಕಾಲ ಬರುವಷ್ಟರಲ್ಲಿ ದೇವರು ಹೇಳಿದ ಯೋಗಶಾಸ್ತ್ರ ಧರ್ಮಗಳಿಗೆ ಹಾನಿ ಏರ್ಪಟ್ಟಿದೆ. ಮಾನವನು ವೇದಗಳಲ್ಲಿ ಆಸಕ್ತಿಪರನಾಗಿ ದೈವಧರ್ಮಗಳನ್ನು ವಿಸ್ಮರಿಸಿದ್ದಾನೆ. ಆ ದಿನ ಋಷಿಗಳು, ಸನ್ಯಾಸಿಗಳು, ತಪಸ್ವಿಗಳು ದೈವಮಾರ್ಗ ಅಲ್ಲದ ಯಜ್ಞಗಳು, ದಾನಗಳು, ವೇದಾಧ್ಯಯನಗಳು, ತಪಸ್ಸುಗಳನ್ನು ಆಚರಿಸಲು ಪ್ರಾರಂಭಮಾಡಿದ್ದಾರೆ. ಆ ಸಮಯದಲ್ಲಿ ದೇವರು ತನ್ನ ಧರ್ಮಗಳನ್ನು ಕಾಪಾಡಿಕೊಳ್ಳುವುದಕ್ಕಾಗಿ ಪುನಃ ತನ್ನ ಶಾಸ್ತ್ರವನ್ನು ಎಲ್ಲರಿಗೂ ತಿಳಿಯುವಂತೆ ಮಾಡುವುದಕ್ಕೆ ಉಪಕ್ರಮಿಸಿದ್ದಾನೆ. ಆ ಪ್ರಯತ್ನದಿಂದಲೇ ಯೋಗಶಾಸ್ತ್ರವನ್ನು ದ್ವಾಪರಯುಗದಲ್ಲಿ ಭಗವದ್ಗೀತೆ ರೂಪದಲ್ಲಿ ಹೇಳಿದ್ದಾನೆ.

ದ್ವಾಪರಯುಗದಲ್ಲಿ ಹೇಳಿರುವುದು ಮಾನವನಾದ ಅರ್ಜುನನಿಗೆ, ಆದ್ದರಿಂದ ಹೇಳುವವನು ಸಹ ಮಾನವನಾಗಿರಬೇಕು. ಆದ್ದರಿಂದ ದೈವಾಂಶ ಕೃಷ್ಣನಾಗಿ ಹುಟ್ಟಿ ಭಗವಂತನಾಗಿದ್ದಾನೆ. ಭಗವಂತನು ಹೇಳಿರುವುದಾದ್ದರಿಂದ ಯೋಗಶಾಸ್ತ್ರಕ್ಕೆ ದ್ವಾಪರಯುಗದಲ್ಲಿ ಭಗವದ್ಗೀತೆ ಎಂದು ಹೆಸರು ಬಂದಿದೆ. ಆದಿಯಲ್ಲಿ ಯೋಗಶಾಸ್ತ್ರವನ್ನು ಸೂರ್ಯನಿಗೆ ಹೇಳಿದಾಗ, ವೇದಗಳ ಪ್ರಸ್ತಾವನೆ ಅದರಲ್ಲಿ ಇಲ್ಲ. ಇಲ್ಲದವುಗಳನ್ನು ಕುರಿತು ಹೇಳಬೇಕಾದ ಅವಶ್ಯಕತೆ ಆ ದಿನ ಇಲ್ಲ. ಕಾಲ ಬದಲಾದಂತೆಲ್ಲಾ ವೇದಗಳು ಹುಟ್ಟಿ ಅವುಗಳ ಪ್ರಾಬಲ್ಯ ಹೆಚ್ಚಾಗುವುದರಿಂದ ದ್ವಾಪರಯುಗ ಅಂತ್ಯದಲ್ಲಿ ಹೇಳಿದ ಭಗವದ್ಗೀತೆಯಲ್ಲಿ ವೇದಗಳನ್ನು ಕುರಿತು ಹೇಳಬೇಕಾಗಿ ಬಂದಿದೆ. ವೇದಗಳು ಮಾಯೆಗೆ

ಪ್ರತಿರೂಪಗಳು ಎಂದು ಹೇಳಿದರೂ ಮಾನವರು ಕೇಳುವ ಸ್ಥಿತಿಯಲ್ಲಿ ಇಲ್ಲವೆಂದು ಮತ್ತು ಹೇಳುವವನು ದೈವಾಂಶವಿರುವ ಭಗವಂತನಾದರೂ, ನೋಡುವುದಕ್ಕೆ ಮಾತ್ರ ಮಾನವನೇ ಆದ್ದರಿಂದ ಕೃಷ್ಣನನ್ನು ಸಹ ತಪ್ಪು ಹಿಡಿದು ಆತನ ಮಾತನ್ನು ಲೆಕ್ಕಿಸುವುದಿಲ್ಲ ಎಂದು ತಿಳಿದು, ಗೀತೆಯನ್ನು ಬೋಧಿಸಿದಾಗಲೇ, ಹೇಳಿದವನು ಸ್ವತಃ ದೇವರೆ ಎಂದು ತಿಳಿಯುವಂತೆ, ದೇವರು ತನ್ನ ವಿಶ್ವರೂಪವನ್ನು ತೋರಿಸಿದ್ದಾನೆ. ವಿಶ್ವರೂಪದಲ್ಲಿರುವಾಗ ಹೇಳಿದ ಮುಖ್ಯವಾದ ಮಾತುಗಳಲ್ಲಿ ವೇದಗಳಿಂದ ದೇವರು ತಿಳಿಯುವುದಿಲ್ಲ ಎನ್ನುವ ಮಾತು ಸ್ಪಷ್ಟವಾಗಿದೆ. ಆದಿಯಲ್ಲಿ ಯೋಗಶಾಸ್ತ್ರವನ್ನು ಸೂರ್ಯನಿಗೆ ಹೇಳಿದಾಗ ವಿಶ್ವರೂಪವು ತೋರಿಸಲಿಲ್ಲ. ಅಂತಹ ಅವಶ್ಯಕತೆ ಆ ದಿನ ಇಲ್ಲವಾದ್ದರಿಂದ ತೋರಿಸಲಿಲ್ಲ. ಹಾಗೆ ಆ ದಿನ ವೇದಗಳನ್ನು ಕುರಿತು ಹೇಳಲಿಲ್ಲ. ಅಂತಹ ಅವಶ್ಯಕತೆ ಆ ದಿನ ಇಲ್ಲವಾದ್ದರಿಂದ ಹೇಳಲಿಲ್ಲ.

ಇಲ್ಲಿಗೆ 5260 ವರ್ಷಗಳ ಪೂರ್ವದಲ್ಲಿ ದ್ವಾಪರಯುಗದಲ್ಲಿ ಭಗವಂತನ ಮೂಲಕ ಎರಡನೇ ಬಾರಿ ಯೋಗಶಾಸ್ತ್ರವನ್ನು ಹೇಳಿದಾಗ ಅದಕ್ಕೆ 'ಗೀತೆ' ಎಂದು ಹೆಸರು ಇಡಲಾಗಿದೆ. ಆದಿಯಲ್ಲಿ ಹೇಳಿದಾಗ ಗೀತೆ ಎಂಬ ಹೆಸರು ಇಲ್ಲ. ಹಾಗೆ **'ಗೀತೆ'** ಎಂದು ಹೆಸರು ಇಡುವುದಕ್ಕೆ ಕಾರಣ ಏನೆಂದರೆ! ಮೊದಲು ಯೋಗಶಾಸ್ತ್ರ ಎನ್ನುವ ಹೆಸರಿನಿಂದ ಹೇಳಿದ ಜ್ಞಾನವನ್ನು ಬಿಟ್ಟು, ತನಗೆ ಇಷ್ಟಬಂದಂತೆ ಮಾನವನು ಜ್ಞಾನ ಎಂಬ ಹೆಸರಿನಲ್ಲಿ ವೇದಗಳನ್ನು, ಇತರ ಪುರಾಣಗಳನ್ನು ಆಶ್ರಯಿಸಿ ದಾರಿ ತಪ್ಪಿಹೋಗುತ್ತಿದ್ದಾನೆಂದು, ಹಾಗೆ ಹೋಗದಿರುವುದಕ್ಕೆ ಇದು ನಿನಗೆ ಹದ್ದು ಎಂದು ಒಂದು ಅರ್ಥ ಕೊಡುವಂತೆ ಗೀತೆ ಎಂದು ಹೆಸರು ಇಟ್ಟಿದ್ದಾರೆ. ಮಾನವನು ದೇವರ ವಿಷಯದಲ್ಲಿ ತನ್ನ ಇಷ್ಟ ಬಂದಂತೆ ನಡೆದುಕೊಳ್ಳದಂತಿರುವುದಕ್ಕೆ, ಪಕ್ಕ ದಾರಿಗಳಾದ ಮಾಯ ಮಾರ್ಗಗಳಲ್ಲಿ ಹೋಗದಿರುವುದಕ್ಕೆ, ಒಂದು ಹದ್ದು ಏರ್ಪಡಿಸಿ, ಈ ಹದ್ದಿನಲ್ಲಿ ನಡೆದುಕೊಂಡಾಗಲೇ ನೀನು ಗುರಿಯನ್ನು ಸೇರುತ್ತೀಯಾ ಎಂದು ಹೇಳಿದ್ದಾನೆ. ಹಾಗೆ ಏರ್ಪಡಿಸಲ್ಪಟ್ಟ ಹದ್ದನ್ನೆ ಗೀತೆ ಎನ್ನುತ್ತಿದ್ದೇವೆ. ಗೀಚಿರುವುದೇ ಹದ್ದು

(ಎಲ್ಲೆ) ಆದ್ದರಿಂದ ಮಾನವನ ಸುತ್ತಲೂ ಗೀಚಿರುವ ಹದ್ದಿನಲ್ಲಿರುವಾಗ, ಮಾನವನ ಜೀವನಕ್ಕೆ ಅರ್ಥ, ಪರಮಾರ್ಥ ಇರುತ್ತದೆ ಎಂದು, ದೇವರು ಹೇಳಿದ ಹದ್ದು ಏನೊ, ನಮ್ಮ ಸುತ್ತಾ ಏರ್ಪಡಿಸಿರುವ ಗೆರೆ ಏನೊ, ಆ ಗೆರೆಯಲ್ಲಿಯೆ ನಡೆದುಕೊಳ್ಳಬೇಕೆಂದರೆ, ಆ ಹದ್ದು ಮೀರದಂತೆ ಇರಬೇಕೆಂದರೆ, ನಾವು ಹೇಗಿರಬೇಕೋ ತಿಳಿಯದೆಹೋದರೆ ಜೀವನಕ್ಕೆ ಒಂದು ನಿರ್ದೇಶತೆ ಇರುವುದಿಲ್ಲ ಎಂದು ಸಹ ಅದರಲ್ಲಿಯೇ ತಿಳಿಸಲಾಗಿದೆ. ವೇದಗಳೆಂಬ ವೃಕ್ಷಗಳು, ಪುರಾಣಗಳೆಂಬ ಬಳ್ಳಿಗಳು, ಯಜ್ಞಯಾಗಾದಿಗಳೆಂಬ ಪ್ರಾಣಿಗಳು, ಜಪತಪಗಳೆನ್ನುವ ಹೆಚ್ಚು ಕಡಿಮೆಗಳಿರುವ ಜೀವನವೆಂಬ ಅರಣ್ಯದಲ್ಲಿ ಜಲಾಶಯಗಳ ಕಡೆ ಪ್ರಾಣಿಗಳು ನಡೆದಿರುವ ಸೀಳುದಾರಿಗಳೆಂಬ ವ್ರತ ನಿಯಮಗಳನ್ನು ನೋಡಿ, ಇವುಗಳೆ ದಾರಿಗಳೆಂದು ಭ್ರಮಿಸುವ ಮಾನವನಿಗೆ ರಾಜಮಾರ್ಗವಾಗಿ ಕಾಣಿಸಿ, ಜನ್ಮ ಎನ್ನುವ ಅರಣ್ಯದಿಂದ ಹೊರಬೀಳುವಂತೆ ಮಾಡುವ ಸ್ವಚ್ಛವಾದ ಮಾರ್ಗವೇ ಗೀತೆ(ಗೆರೆ). ಭೂಪಟದಲ್ಲಿ ಹೈವೆ ರಸ್ತೆಯನ್ನು ಗೆರೆಯಹಾಗೆ ತೋರಿಸಿದಂತೆ ಜೀವನದ ಪಟದಲ್ಲಿ ರಾಜಮಾರ್ಗದಂತೆ ಗೀಚಿ ತೋರಿಸಿದ ಜ್ಞಾನವೇ ಗೀತೆ. ಭಗವಂತನು ಗೀಚಿ ತೋರಿಸಿರುವುದು ಆದ್ದರಿಂದ ಭಗವದ್ಗೀತೆಯಾಗಿದೆ.



# ನೀವು ಆಸ್ತಿಕರಾ – ನಾಸ್ತಿಕರಾ

ಪೂರ್ವವು ಆದಿಯಲ್ಲಿಯೇ ದೈವಜ್ಞಾನವನ್ನು ಮಾನವರಿಗೆ ತಿಳಿಸಿದರೂ ಕಾಲವು ಕಳೆದಂತೆಲ್ಲಾ, ಮಾನವರು ಉಚ್ಚ ನೀಚಗಳನ್ನು ಆಲೋಚಿಸದೆ, ತಮ್ಮ ಹದ್ದನ್ನು ತಿಳಿದುಕೊಳ್ಳದೆ, ಹದ್ದುಮೀರಿ ನಾಸ್ತಿಕರಾಗಿ ಹೋಗುತ್ತಿದ್ದಾರೆಂದು ತಿಳಿದ ದೇವರು, ಮಾನವರಿಗೆ ಪ್ರತ್ಯೇಕಿಸಿ ಹದ್ದು (ಗೆರೆ) ಎಂಬ ಹೆಸರಿನಲ್ಲಿ ಹೇಳಿರುವುದೇ ಭಗವದ್ಗೀತೆ. ಗೀತೆಯನ್ನು ಹೇಳಿದರೂ, ಈಗಿರುವ ಆಸ್ತಿಕರು ದೇವರು ಹೇಳಿದ ಪ್ರಕಾರ ನಡೆಯುತ್ತಿದ್ದಾರಾ? ದೇವರು ಹೇಳಿದ ಗೀತೆಯನ್ನು

ಬಿಟ್ಟು, ಮಾಯೆ ಹೇಳಿದ ವೇದಗಳಿಂದ ಪ್ರಾರಂಭಗೊಂಡು ಅನೇಕವಾಗಿರುವ ಬೋಧನೆಗಳಲ್ಲಿ ಆಸಕ್ತಿ ಹೊಂದಿ ಅವುಗಳ ಹಿಂದೆ ಹೋಗುತ್ತಿದ್ದಾರೆ. ಕೆಲವರು ವೈಷ್ಣವವೆಂದು, ಕೆಲವರು ಶೈವವೆಂದು, ಕೆಲವರು ಕುಮಾರಿ ಸಂಪ್ರದಾಯವೆಂದು, ಕೆಲವರು ಅಚಲ ಸಂಪ್ರದಾಯವೆಂದು, ಕೆಲವರು ಸಿದ್ಧಿಯೋಗವೆಂದು, ಕೆಲವರು ಗುರುಸಂಪ್ರದಾಯವೆಂದು, ಬೋಧಕರೆಲ್ಲಾರು ಒಬ್ಬೊಬ್ಬರು ಒಂದೊಂದು ಸಂಪ್ರದಾಯವನ್ನು ಬೋಧಿಸುತ್ತಾ, ಗೀತೆಯ ಉದ್ದೇಶವನ್ನು ಸ್ವಲ್ಪವೂ ಸಹ ಆಚರಿಸುತ್ತಿಲ್ಲ. ಭಗವದ್ಗೀತೆ ಎಂದರೆ ಏನೋ ತಿಳಿಯದ ಸಮಾಜವು ಈದಿನ ಹಿಂದೂಮತದಲ್ಲಿ ಇದೆ. ಕೆಲವರು ಸ್ವಾಮಿಗಳು ನೋಡುವ ಆಕಾರಕ್ಕೆ ಭಗವದ್ಗೀತೆಯಲ್ಲಿನ ಶ್ಲೋಕಗಳು ಹೇಳಿದರೂ, ಪ್ರಜೆಗಳಿಗೆ ಬೋಧಿಸುವುದೆಲ್ಲವು ಗೀತೆಗೆ ವಿರುದ್ಧವಾದ ಭಾವನೆಗಳೆ. ಕೆಲವರಾದರೆ ವೇದಗಳನ್ನು ಪ್ರಮಾಣವಾಗಿ ತೆಗೆದುಕೊಳ್ಳಬೇಕಾಗಲಿ ಗೀತೆಯನ್ನು ಪ್ರಮಾಣವಾಗಿ ತೆಗೆದುಕೊಳ್ಳಬಾರದು ಎನ್ನುತ್ತಿದ್ದಾರೆ. ದೇವರೆ ಸ್ವತಃವಾಗಿ ಗೀತೆಯಲ್ಲಿ ಒಬ್ಬ ದೇವರ ಬಗ್ಗೆ ಹೇಳಿದರೆ, ಸ್ವಾಮಿಗಳೆಲ್ಲರೂ ಎಷ್ಟೋ ಜನ ದೇವರುಗಳನ್ನು ಕುರಿತು ಹೇಳುತ್ತಿದ್ದಾರೆ, ಅನ್ಯ ದೇವತಾರಾಧನೆ ಸರಿಯಲ್ಲವೆಂದು, ಹಾಗೆ ಮಾಡುವುದರಿಂದ ಮೋಕ್ಷವು ಲಭಿಸುವುದಿಲ್ಲವೆಂದು, ಗೀತೆಯಲ್ಲಿ ರಾಜವಿದ್ಯೆ ರಾಜಗುಹ್ಯ ಯೋಗದಲ್ಲಿ 23ನೇ ಶ್ಲೋಕದಲ್ಲಿ ಭಗವಂತನೇ ಸ್ವತಃ ಹೇಳಿದರೆ, ಆ ಮಾತನ್ನು ಪ್ರಜೆಗಳಿಗೆ ಬೋಧಿಸಬೇಕಾದ ಸ್ವಾಮಿಗಳೆ ಸ್ವತಃ ಅನ್ಯದೇವತೆಗಳಿಗೆ ಪೂಜೆಗಳು ಮಾಡುತ್ತಿದ್ದಾರೆ. ಗೀತೆಯಲ್ಲಿ ಅವಶ್ಯಕತೆ ಬಂದಾಗ ಧರ್ಮಗಳನ್ನು ಪುನರುದ್ದರಿಸುವುದಕ್ಕೆ ಆಗಾಗ ಭೂಮಿ ಮೇಲೆ ಭಗವಂತನಾಗಿ ಹುಟ್ಟುತ್ತೇನೆಂದು ದೇವರೆ ಹೇಳಿದಾಗ, ಇದಕ್ಕೂ ಮೊದಲು ಧರ್ಮವನ್ನು ಎಷ್ಟುಮಾತ್ರ ಹೇಳದ ರಾಮನಾಗಿ ಹುಟ್ಟಿದ್ದಾನೆಂದು ಪ್ರಚಾರ ಮಾಡುವುದು ಆಸ್ತಿಕರಿಗೆ ಸರಿಯಾ? ತನ್ನ ಜನ್ಮ ಬಹಳ ರಹಸ್ಯವಾದುದ್ದು ಎಂದು ಯಾರಿಗೂ ಅರ್ಥ ಆಗುವುದಿಲ್ಲ ವೆಂದು ಗೀತೆಯಲ್ಲಿ ದೇವರೆ ಹೇಳಿರುವಾಗ, ಕೃಷ್ಣನ ಪ್ರವರ್ತನೆ ಚೆನ್ನಾಗಿಲ್ಲವೆಂದೂ, ರಾಮನು ಸತ್‌ಪ್ರವರ್ತನೆಂದು ಸ್ವಾಮಿಗಳೆಲ್ಲರೂ ಕೃಷ್ಣನಿಗಿಂತ ಮುಖ್ಯವಾಗಿ ರಾಮನನ್ನು ಆರಾಧಿಸುವುದು ಆಸ್ತಿಕರಿಗೆ ಸರಿಯೇನಾ? ದೈವತ್ವ ಎಂದರೆ

ಏನೋ ಗೀತೆಯಲ್ಲಿ ಸಂಪೂರ್ಣವಾಗಿ ಹೇಳಿರುವಾಗ, ಅದರಲ್ಲಿನ ವಿಷಯ ಅರ್ಥವಾಗದೆ ವ್ರತಗಳು ಮಾಡುವವರು ಆಸ್ತಿಕರಾ? ಶರೀರದಲ್ಲಿ ಎರಡು ಯಜ್ಞಗಳು ನಡೆಯುತ್ತಿವೆ ಎಂದು ಹೇಳಿದಾಗ ಹೊರಗಿನ ಯಜ್ಞಗಳು ಮಾಡುವವರು ಜ್ಞಾನ ಇರುವ ಆಸ್ತಿಕರಾ? ಯಜ್ಞ ಎಂದರೆ ಸುಡುವುದೆಂದು, ಇಲ್ಲವೆ ನಾಶ ಮಾಡುವುದೆಂದು ಅರ್ಥವಾಗುವಂತೆ ದ್ರವ್ಯಗಳನ್ನು ಇಲ್ಲದಂತೆ ಮಾಡುವುದನ್ನು ದ್ರವ್ಯಯಜ್ಞ ಎಂದು, ಜ್ಞಾನಗಳನ್ನು ಇಲ್ಲದಂತೆ ಮಾಡುವುದು ಜ್ಞಾನಯಜ್ಞ ಎಂದು ಗೀತೆಯಲ್ಲಿ ಹೇಳಿರುವಾಗ, ಕೆಲವರು ಸ್ವಾಮಿಗಳು ತಮ್ಮ ಉಪನ್ಯಾಸ ಕಾರ್ಯಗಳನ್ನು ಗೀತಾಯಜ್ಞಗಳು ಎಂದು ಹೆಸರು ಇಡುವುದು, ಇಷ್ಟು ಬಾರಿ ಮಾಡಿದ್ದೇವೆ ಎಂದು ತಿಳಿಸುವುದಕ್ಕೆ 64ನೇ ಗೀತಾಯಜ್ಞ ಎಂದು, 100ನೇ ಗೀತಾ ಯಜ್ಞವೆಂದು ಪ್ರಕಟಣೆಗಳು ಬರೆದು ಪ್ರಚಾರ ಮಾಡುವುದು ಸರಿಯಾ? ಭಗವದ್ಗೀತೆಯಲ್ಲಿನ ಅರ್ಥದ ಪ್ರಕಾರ ಇಷ್ಟುಸಲ ಗೀತೆಯನ್ನು ಸುಟ್ಟು ಇಲ್ಲದಂತೆ ಮಾಡಿದ್ದೇವೆ ಎನ್ನುವಂತೆ ಅಲ್ಲವೆ! ಗೀತೆಯನ್ನು ತಮಗೋಸ್ಕರ ದೇವರು ಏರ್ಪಡಿಸಿರುವ ಹದ್ದೆಂದು, ಯಾವ ಸ್ವಾಮಿಗಳಾದರೂ ಗ್ರಹಿಸಿ ಬೋಧಿಸುತ್ತಿದ್ದಾರಾ? ಗೀತೆಯಲ್ಲಿ ಸರ್ವವನ್ನು ತಿಳಿದಿದ್ದೇವೆಂದೂ, ನಾವು ಸರ್ವಜ್ಞರೆಂದು ಹೇಳಿಕೊಳ್ಳುವವರು, ಇತರ ದೇವತೆಗಳಿಗೆ ಈ ವಿಧವಾಗಿ ಪೂಜೆಗಳು ಮಾಡಬೇಕೆಂದು ಹೇಳಬಹುದಾ? ಅನ್ಯದೇವತೆಗಳ ಆರಾಧನೆ ದಾರಿ ತಪ್ಪಿದ ಮಾರ್ಗವೆಂದು ಗೀತೆ ಸ್ಪಷ್ಟವಾಗಿ ಬೋಧಿಸುತ್ತಿರುವಾಗ, ಅನ್ಯದೇವತಾರಾಧನೆಗಳಿಗೂ ಇಂತಹ ಪದ್ಧತಿಗಳು ಇವೆ ಎಂದು, ಅವುಗಳ ಪ್ರಕಾರವೇ ಪೂಜೆಗಳು ಮಾಡಬೇಕು ಎನ್ನುವವರು ನಿಜವಾಗಲೂ ಆಸ್ತಿಕರಾ? ವೆಂಕಟೇಶ್ವರನ ಪೂಜಾ ವಿಧಾನ ವೈಖಾನಸ ಪ್ರಕಾರವೆಂದು, ಪದ್ಮಾವತಿಗೆ ಪಂಚರಾತ್ರ ಪ್ರಕಾರವೆಂದು, ಆಗಮ ಪೂಜಾ ವಿಧಾನಗಳು ಕಲ್ಪಿಸಿದವರು ಆಸ್ತಿಕರಾ? ನನ್ನೊಬ್ಬನನ್ನೇ ವಿಶ್ವಾಸಿಸು ಎಂದು ಗೀತೆಯಲ್ಲಿ ಹೇಳಿರುವಾಗ, ನೀನೇನಾ ದೇವರು ಎನ್ನುವಂತೆ ಅನೇಕ ದೇವತೆಗಳನ್ನು ಕಲ್ಪಿಸಿ, ಅವರಿಗೆ ಪೂಜಾ ವಿಧಾನಗಳನ್ನು ಸಹ ಕಲ್ಪಿಸುವುದು ಆಸ್ತಿಕರಿಗೆ ತಕ್ಕ ಕೆಲಸವೇನಾ? ಗೀತೆಯಲ್ಲಿ ತಮ್ಮ ಹಣೆಬರಹವನ್ನು ಬದಲಾಯಿಸಿಕೊಳ್ಳುವ ವಿಧಾನ ಶರೀರದಲ್ಲಿದೆ

ಎಂದು ಸೂಚಿಸಿರುವಾಗ, ಹೊರಗೆ ನದಿಗಳಲ್ಲಿ ಮುಳುಗಿ ಪಾಪ ಹೋಗುತ್ತದೆಂದುಕೊಳ್ಳುವುದು ಗೀತೆಗೆ ವಿರುದ್ಧ ಅಲ್ಲವೆ! ದೈವಜ್ಞಾನದಲ್ಲಿ ಮಂತ್ರಗಳ ಪ್ರಸ್ತಾವನೆ ಇಲ್ಲದಂತೆ ಗೀತೆಯನ್ನು ಹೇಳಿರುವಾಗ, ಉಪದೇಶವೆಂದು ಗುರುಗಳು ಶಿಷ್ಯರಿಗೆ ಮಂತ್ರಗಳನ್ನು ಹೇಳುವುದು ಗೀತೆಗೆ ವಿರುದ್ದ ಅಲ್ಲವೆ! ಯಾರಿಗೂ ತಿಳಿಯದವನೆಂದು ಗೀತೆಯಲ್ಲಿ ದೇವರು ಹೇಳಿರುವಾಗ, ಅದೇ ಗೀತೆಯನ್ನು ಬೋಧಿಸುವ ಸ್ವಾಮಿಗಳು, ಜೀವಾತ್ಮವೇ ದೇವರೆಂದು ಹೇಳಿಕೊಳ್ಳುವುದು ತಪ್ಪಲ್ಲವೆ! ಗೀತೆಯಲ್ಲಿ ಕ್ಷರ, ಅಕ್ಷರ, ಪುರುಷೋತ್ತಮರೆಂದು ಮೂವರು ಪುರುಷರಾಗಿ ಹೇಳಿಕೊಂಡ ಶ್ಲೋಕಗಳು ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿರುವಾಗ, ಮೂವರು ಪುರುಷರು ಯಾರೊ ವಿವರಿಸಲಾರದ ಸ್ವಾಮಿಗಳು ಆಸ್ತಿಕರಾ? ಪುರುಷರು ಯಾರೋ? ಪ್ರಕೃತಿ ಯಾವುದೋ ಗುರುತಿಸಲಾರದೆ, ಪ್ರಕೃತಿಯನ್ನು ಹಿಡಿದುಕೊಂಡು ಪುರುಷನೆಂದು ಭ್ರಮಿಸುವವರು ನಾಸ್ತಿಕರು ಅಲ್ಲದೆ ಆಸ್ತಿಕರಾಗುತ್ತಾರಾ! ಒಳಗಿನ ಆತ್ಮಜ್ಞಾನ ತಿಳಿಯದೆ ಹೊರಗಿರುವ ಗಿಡಕ್ಕು, ಹುತ್ತಕ್ಕು ಮುಗಿಯುವವರು ನಾಸ್ತಿಕರಲ್ಲದೆ ಆಸ್ತಿಕರಾಗುತ್ತಾರಾ! ಹೀಗೆ ಪ್ರಶ್ನಿಸುತ್ತಾ ಹೋದರೆ ಸೂತ್ರದ ಪ್ರಕಾರ ಇಂದು ದೊಡ್ಡ ಸ್ವಾಮಿಗಳು ಮೊದಲುಗೊಂಡು ಸಣ್ಣ ಪೂಜಾರಿವರೆಗೂ ಎಲ್ಲರೂ ದೈವ ಧನ ಎನ್ನುವ ಆಸ್ತಿ ಇಲ್ಲದ ನಾಸ್ತಿಪರರೆ.! ದೇವರು, ದೇವರ ಭಕ್ತಿ ತಮಗೆ ಇಲ್ಲವೆಂದು ಹೊರಗೆ ಹೇಳುಕೊಳ್ಳುವವರು ಕಾಣಿಸುವ ನಾಸ್ತಿಕರಾದರೆ, ಇಲ್ಲದಿದ್ದರೂ ಇದೆ ಎಂದು ಭ್ರಮಿಸುತ್ತಾ ಇತರರನ್ನು ಭ್ರಮಿಸುವಂತೆ ಮಾಡುವವರು ಆಸ್ತಿಕ ಮುಸುಗು ಹಾಕಿಕೊಂಡ ನಾಸ್ತಿಕರೆಂದು, ಇವರ ಬಗ್ಗೆ ಜಾಗ್ರತೆಯಾಗಿರಬೇಕೆಂದು, ಇಲ್ಲದಿದ್ದರೆ ಅವರನ್ನು ಅನುಸರಿಸಿ ಉಳಿದವರೂ ಸಹ ಜೀವನವನ್ನು ನಾಸ್ತಿಕತ್ವದಲ್ಲಿ ಕಳೆಯಬೇಕಾಗಿಬರುತ್ತದೆ ಎಂದು ಹೇಳುತ್ತಿದ್ದೇವೆ. ಉದಾಹರಣೆಯಾಗಿ ಒಂದು ವಿಷಯವನ್ನು ನೋಡೋಣ.

ಇಪ್ಪತ್ತೈದು ವರ್ಷಗಳ ಹಿಂದೆ ಒಂದು ಆಶ್ರಮದಲ್ಲಿ ಒಬ್ಬ ಸ್ವಾಮೀಜಿ ಜಯಂತಿ ಉತ್ಸವ ಸಂದರ್ಭವಾಗಿ ಬಹಳ ಜನ ದೊಡ್ಡ ದೊಡ್ಡ ಸ್ವಾಮಿಗಳು

ಪಾಲ್ಗೊಂಡಿದ್ದರು. ಅಲ್ಲಿಗೆ ಬಂದಿರುವ ಸ್ವಾಮಿಗಳೆಲ್ಲರೂ ಸನ್ಯಾಸಿಗಳೇ. ಅವರಲ್ಲಿ ಒಬ್ಬ ಸ್ವಾಮಿಜೀ ಉಪನ್ಯಾಸ ಹೇಳುತ್ತಾ, ಸನ್ಯಾಸತ್ವವು ಬಹಳ ದೊಡ್ಡ ಮಾರ್ಗವೆಂದು ಹೀಗೆ ಹೇಳತ್ತಾ ಹೋದನು **"ಸಂಸಾರ ಜೀವನದಲ್ಲಿ ಇರುವವರ್‍ಯಾರು ಸಹ ಜ್ಞಾನ ತಿಳಿದುಕೊಳ್ಳಲಾರರು. ಜ್ಞಾನಾರ್ಜನೆಗೋಸ್ಕರ ಆದಿಶಂಕರಾಚಾರ್ಯನು ಚಿಕ್ಕ ವಯಸ್ಸಿನಲ್ಲಿಯೇ ಸನ್ಯಾಸತ್ವವನ್ನು ಸ್ವೀಕರಿಸಿ ಕಾಷಾಯ ವಸ್ತ್ರಗಳು ಧರಿಸಿದ್ದಾನೆ. ಹಾಗೆಯೇ ವಿವೇಕಾನಂದನು ವಿವಾಹ ಮಾಡಿಕೊಳ್ಳದೆ ಸನ್ಯಾಸತ್ವವನ್ನು ಹೊಂದಿದ್ದಾನೆ. ನಾವು ಸಹ ಸಂಸಾರವನ್ನು ತ್ಯಜಿಸಿ ಸನ್ಯಾಸತ್ವವನ್ನು ಸ್ವೀಕರಿಸಿದ್ದೇವೆ. ಸನ್ಯಾಸ ಜೀವನದಲ್ಲಿ ಯಾವ ಆತಂಕ ಇಲ್ಲದಂತೆ ದೈವಜ್ಞಾನ ತಿಳಿದುಕೊಳ್ಳಬಹುದು ಆಚರಿಸಬಹುದು. ಸಂಸಾರ ಜೀವನದಲ್ಲಿ ದೈವಜ್ಞಾನ ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುದಿಲ್ಲ. ಒಂದು ವೇಳೆ ತಿಳಿದುಕೊಂಡರೂ ಆಚರಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದಲೇ ದೊಡ್ಡವರೆಲ್ಲರೂ ಸನ್ಯಾಸತ್ವವನ್ನು ಸ್ವೀಕರಿಸಿದ್ದಾರೆ. ಸಂಸಾರಿಗಳು ಜ್ಞಾನತಿಳಿಯಲಾರರು, ಸನ್ಯಾಸಿಗಳು ಮಾತ್ರವೆ ಜ್ಞಾನವನ್ನು ತಿಳಿಯಬಲ್ಲರು. ಆದ್ದರಿಂದ ಪೂರ್ವದಲ್ಲಿ ದೊಡ್ಡವರು "ಸಂಸಾರಿ ಛೀ, ಸನ್ನ್ಯಾಸಿ ಸೈ ಎಂದಿದ್ದಾರೆ."** ಎಂದು ಈ ವಿಧವಾಗಿ ಹೇಳಿದ ಸ್ವಾಮಿಗಳ ಮಾತುಗಳಿಗೆ, ಒಬ್ಬ ಯುವಕನು ಪ್ರೇರೇಪಿಸಿದವನಾಗಿ ತಾನೂ ಸಹ ಮದುವೆ ಮಾಡಿಕೊಳ್ಳದೆ ಸನ್ಯಾಸತ್ವವನ್ನು ಸ್ವೀಕರಿಸಿ ಸ್ವಾಮಿಜೀಯಂತೆ ಬದಲಾಗಿಹೋಗಿದ್ದಾನೆ. ಆ ಯುವಕನು ಸ್ವಾಮಿಗಳ ಮಾತುಗಳು ಕೇಳಿ ಕಾಷಾಯ ವಸ್ತ್ರಗಳು ಧರಿಸಿದರೇನೆ ಸನ್ಯಾಸಿಗಳಾಗುತ್ತೇವೆ ಎಂದುಕೊಂಡನು.

ಈ ವಿಷಯದಲ್ಲಿ ಸ್ವಾಮಿಗಳು ಹೇಳಿದ ಮಾತುಗಳನ್ನು ಧರ್ಮನಾ ಅಧರ್ಮನಾ ಎಂದು ನೋಡಿದರೆ, ಭಗವದ್ಗೀತೆಯಲ್ಲಿ ಆತ್ಮ ಸಂಯಮ ಯೋಗ ಎನ್ನುವ ಅಧ್ಯಾಯದಲ್ಲಿ ಮೊದಲ ಶ್ಲೋಕದಲ್ಲಿಯೇ ಭಗವಂತನು ಈ ವಿಧವಾಗಿ **"ಜ್ಞಾನಾಗ್ನಿ ಇಲ್ಲದವನು (ಜ್ಞಾನಧನ ಇಲ್ಲದವನು), ಮಾಡಬೇಕಾದ ಕೆಲಸಗಳು ಮಾಡದಂತೆ ಇರುವವನು ನಿಜವಾದ ಸನ್ಯಾಸಿ ಅಲ್ಲ. ಕರ್ಮಫಲಗಳಾದ ಪಾಪ ಪುಣ್ಯಗಳ ಮೇಲೆ ಆಸೆ ಇಲ್ಲದೆ ಕಾರ್ಯಗಳು ಮಾಡುವವನನ್ನು ನಿಜವಾದ ಸನ್ಯಾಸಿ,**

**ನಿಜವಾದ ಯೋಗಿ ಎನ್ನಬಹುದು."** ಎಂದು ಹೇಳಿದ್ದಾನೆ. ಇದರಿಂದ ಕಾಷಾಯವಸ್ತ್ರಗಳಿಗೂ, ಸನ್ಯಾಸತ್ವಕ್ಕು ಸಂಬಂಧ ಇಲ್ಲವೆಂದು ತಿಳಿಯುತ್ತಿದೆ. ದೇವರು ಹೇಳಿದವಮಾತಿಗೆ ವಿರುದ್ಧದಿಕ್ಕಿನಲ್ಲಿ ನಡೆಯುತ್ತಾ, ವಿವಾಹ ಮಾಡಿಕೊಂಡವರಂತೆ ಕೆಲಸಗಳು ಮಾಡದೆ, ಮೌನ ದೀಕ್ಷೆಯಲ್ಲಿ ಇದ್ದೇವೆಂದು ಮಾತನಾಡದವರು ಕೆಲವರು, ಯೋಗದೀಕ್ಷೆಯಲ್ಲಿ ಇದ್ದೇವೆಂದು ಹೊರಗೆ ಕಾಣಿಸದವರು ಕೆಲವರಿದ್ದಾರೆ. ಕಾಷಾಯುವೆಂದರೆ ಸನ್ಯಾಸತ್ವವೆಂಬ ಅರ್ಥಬರುವಂತೆ ಇರುವುದು ಧರ್ಮವಲ್ಲ ಅಧರ್ಮವೇ ಎಂದು ತಿಳಿಯುತ್ತಿದೆ. ಎಷ್ಟೋ ಜನ ಸ್ವಾಮೀಜಿಗಳು ಭಗವದ್ಗೀತೆಯಲ್ಲಿ ದೈವಜ್ಞಾನವನ್ನು ಗ್ರಹಿಸಿಕೊಳ್ಳದೆ, ತಾವು ಕೆಟ್ಟುಹೋಗಿ ಇತರರನ್ನು ಕೆಡಿಸುತ್ತಿದ್ದಾರೆ. ಈದಿನ ಹಿಂದೂಗಳಲ್ಲಿ ಶೇಕಡ 85% ರಷ್ಟು ಭಗವದ್ಗೀತೆ ಎಂದರೆ ಏನೋ ಎಂದು ತಿಳಿಯದವರು ಇದ್ದಾರೆ. ಕೇವಲ ಶೇಕಡ 15% ರಷ್ಟು ಭಗವದ್ಗೀತೆಯನ್ನು ನೋಡಿದವರು ಕೆಲವರಿರುವಾಗ, ಕೆಲವರು ಗೀತೆಯನ್ನು ಓದಿದವರು ಇದ್ದಾರೆ. ಓದಿದವರಲ್ಲಿ ಸ್ವಾಮಿಗಳು ಕೆಲವರು ಇರುವಾಗ ಅವರಿಗೆ ಗೀತೆ ಅರ್ಥ ಆಗಿಲ್ಲವೆಂದು ತಿಳಿಯುತ್ತಿದೆ. ಗೀತೆ ಆಧ್ಯಾತ್ಮಿಕ ಪ್ರಮಾಣ ಗ್ರಂಥವೆಂದು ಬಹಳ ಜನರಿಗೆ ತಿಳಿಯದೆ ಎಷ್ಟೋಜನ ಸ್ವಾಮಿಗಳು ಪುರಾಣಗಳನ್ನು, ಇತಿಹಾಸಗಳನ್ನು ತಮ್ಮ ಬೋಧನೆಗಳಲ್ಲಿ ಹೆಚ್ಚಾಗಿ ಹೇಳಿಕೊಳ್ಳುತ್ತಿದ್ದಾರೆ. ಪುರಾಣ ಇತಿಹಾಸಗಳು ಕಾಲಕ್ಷೇಪಕ್ಕಾಗಲಿ, ಕರ್ಮ ಕ್ಷೇಪಕ್ಕೆ ಕೆಲಸಕ್ಕೆ ಬರುವುದಿಲ್ಲವೆಂದು ತಿಳಿಯದಂತಿದ್ದಾರೆ. ಜ್ಞಾನಾಗ್ನಿ ಕರ್ಮವೆಂಬ ಕಟ್ಟಿಗೆಗಳನ್ನು ಸುಡುವುದು. ಜ್ಞಾನಾಗ್ನಿ ಗೀತೆ ಜ್ಞಾನದಿಂದಲೇ ಲಭಿಸುತ್ತದೆ. ಜ್ಞಾನಾಗ್ನಿ ಎನ್ನುವ ಜ್ಞಾನಧನ ಇರುವವನೇ ಆಸ್ತಿಕನು. ಗೀತೆಯನ್ನು ಅನುಸರಿಸದೆ, ಅದರ ಹದ್ದಿ(ಎಲ್ಲೆಯ)ನಲ್ಲಿ ಇಲ್ಲದೆ, ತನ್ನ ಇಷ್ಟಬಂದಂತೆ ನಡೆದುಕೊಳ್ಳುವವನು ಜ್ಞಾನಧನ ಇಲ್ಲದ ನಾಸ್ತಿಕನೆಂದು ಹೇಳಬಹುದು. ಒಟ್ಟಿನಲ್ಲ ಆಸ್ತಿಕತ್ವವನ್ನು ಕುರಿತು ತಿಳಿಯದವನು ಆಸ್ತಿಕನು ಹೇಗೆ ಆಗುತ್ತಾನೆ? ಆದ್ದರಿಂದ ಮೊದಲು ಆಸ್ತಿಕತ್ವ ಎಂದರೆ ಏನು ಎಂದು ಈಗಿನ ಆಸ್ತಿಕರು ಅಂದುಕೊಳ್ಳುವವರು ತಿಳಿಯಬೇಕಾದ ಅವಶ್ಯಕತೆ ಇದೆ.

ಮತ್ತೇ ಕೆಲವರು ಸಂಸ್ಕೃತ ಭಾಷೆಯನ್ನು ಕಲಿತ ಮಾತ್ರಕ್ಕೆ ಸ್ವಾಮಿಗಳಾಗಿ ಆಸ್ತಿಕರು ಅಂದುಕೊಳ್ಳುತ್ತಿದ್ದಾರೆ. ಸಂಸ್ಕೃತ ಭಾಷೆ ತಿಳಿದರೇನೆ ಜ್ಞಾನ ತಿಳಿಯುತ್ತದೆ ಎಂಬ ಉದ್ದೇಶದಿಂದ ಕೆಲವರು ಇದ್ದಾರೆ. ಸಂಸ್ಕೃತ ಭಾಷಾ ಪಾಂಡಿತ್ಯವನ್ನೇ ಜ್ಞಾನ ಎಂದುಕೊಳ್ಳುವವರು ಇದ್ದಾರೆ. ಭಾವನೆಯನ್ನು ತಿಳಿಸುವುದು ಭಾಷೆ. ಯಾವ ಭಾಷೆ ಆದರೂ ಅದರಲ್ಲಿ ತಿಳಿಯಬೇಕಾದ ಸಮಾಚಾರ ಮಾತ್ರವೇ ಇರುತ್ತದೆ. ಯಾವ ಭಾಷೆ ಮೂಲಕವಾದರು ಜ್ಞಾನವನ್ನು ತಿಳಿಯಬಹುದು. ಒಂದು ಸಂಸ್ಕೃತ ಭಾಷೆಯ ಮೂಲಕವೇ ಜ್ಞಾನ ತಿಳಿಯುತ್ತದೆ ಅಂದುಕೊಳ್ಳುವುದು ತಪ್ಪುಭಾವನೆ. ಇದರಿಂದ ಸಂಸ್ಕೃತ ತಿಳಿದವರು ಆಸ್ತಿಕರೆಂದುಕೊಳ್ಳುವುದು ಸಹ ತಪ್ಪು ಭಾವನೆ. ಈದಿನ ಬಹು ಭಾಷಾಕೋವಿದನು ಸಹ ನಾಸ್ತಿಕನಾಗಿರುವುದು, ಓದು ಬಾರದವನು ಸಂಪೂರ್ಣಜ್ಞಾನಿಯಾಗಿ ಆಸ್ತಿಕನಾಗಿರುವುದು ಇದೆ. ಜ್ಞಾನಧನ ಇಲ್ಲದವನು ದೊಡ್ಡ ಕುಲದಲ್ಲಿ ಹುಟ್ಟಿ ಸಂಸ್ಕೃತ ಪಾಂಡಿತ್ಯವಿದ್ದರೂ ನಾಸ್ತಿಕನೆ, ಜ್ಞಾನಧನ ಇರುವವನು ನೀಚಕುಲದಲ್ಲಿ ಹುಟ್ಟಿ ಸಂಸ್ಕೃತ ಪಾಂಡಿತ್ಯ ಇಲ್ಲದಿದ್ದರು ಆಸ್ತಿಕನೇ ಆಗುತ್ತಾನೆ.

ಕೆಲವರು ಆಸ್ತಿಕರು ಸಂಸ್ಕೃತ ಶ್ಲೋಕಗಳನ್ನು ಕಂಠಸ್ತ ಮಾಡಿಕೊಂಡು, ಅನುಷ್ಠಾನ ಎನ್ನುವ ಹೆಸರಿನಲ್ಲಿ ನಿಯಮಗಳನ್ನು ಆಚರಿಸುತ್ತಾ, ಕಲಿತುಕೊಂಡ ಶ್ಲೋಕಗಳನ್ನು ಹೇಳುತ್ತಿರುತ್ತಾರೆ. ಪ್ರಜೆಗಳಿಗೆ ಅವರ ಅನುಷ್ಠಾನದಿಂದಾಗಲಿ, ಅವರ ವೇದಪಠನದಿಂದಾಗಲಿ, ಸ್ವಲ್ಪವೂ ಸಹ ಜ್ಞಾನ ಲಭಿಸುವುದಿಲ್ಲ. ಕೆಲವರಿಗೇನೋ ತಾವು ಕಲಿತುಕೊಂಡ ಶ್ಲೋಕಗಳಿಗೆ ಅರ್ಥ ತಿಳಿಯದು. ಪೂರ್ವದಿಕ್ಕಿಗೆ ತಿರುಗಿ ಮಂತ್ರ ಹೇಳುವವರಿಗೆ ಪೂರ್ವಕ್ಕೆ ಏಕೆ ತಿರುಗಬೇಕೋ ತಿಳಿಯದು. ಮೂಗು ಹಿಡಿದುಕೊಂಡು ಮಂತ್ರಶ್ಲೋಕ ಓದುತ್ತಿರುವವರಿಗೆ ಮೂಗು ಏಕೆ ಹಿಡಿದುಕೊಳ್ಳಬೇಕೊ ತಿಳಿಯದು. ಮಂತ್ರವನ್ನು ಹೇಳುವಾಗ ಮೂಗನ್ನು ಬಿಗಿಯಾಗಿ ಹಿಡಿದುಕೊಂಡು ಶ್ವಾಸ ಆಡದಂತೆಮಾಡಿ ಮಂತ್ರವನ್ನು ಪಠಿಸಬೇಕೆಂದು ನಿಯಮವಿರುವಾಗ, ಆ ವಿಷಯವು ತಿಳಿಯದ ಕಾರಣ ಕಾಣಿಸುವಂತೆ ಮೂಗಿನ ಮೇಲೆ ಬೆರಳಿಟ್ಟುಕೊಂಡು, ಶ್ವಾಸ ಯಥಾಪ್ರಕಾರವಾಗಿ

ಆಡುತ್ತಿರುವಾಗ ಮಂತ್ರ ಹೇಳುವವರೂ ಸಹ ಇದ್ದಾರೆ. ಹೀಗೆ ನಾವು ನಿಷ್ಠಾ ಗರಿಷ್ಠರಾದ ಆಸ್ತಿಕರು ಎಂದುಕೊಳ್ಳುವವರೂ ಸಹ, ತಮ್ಮ ನಿಷ್ಠೆಯನ್ನು ಕುರಿತು ತಮಗೇ ತಿಳಿಯದಿದ್ದರೂ, ಇತರರನ್ನು ಅವಹೇಳನವಾಗಿ ಮಾತನಾಡುವುದು ನಡೆಯುತ್ತದೆ. ಆಸ್ತಿಕತ್ವದ ಸೂತ್ರ ತಿಳಿಯದ ಕೆಲವರು, ವೈದಿಕ ಅನುಷ್ಠಾನ ಪಂಡಿತರು ಇತರರನ್ನು ಹೇಗೆ ಹೇಳನವಾಗಿ ಮಾತನಾಡುತ್ತಿದ್ದಾರೋ ಉದಾಹರಣೆಯಾಗಿ ಒಂದು ಪುಸ್ತಕದಲ್ಲಿ ಬರೆಯಲ್ಪಟ್ಟ ವಿಷಯವನ್ನು ಕೆಳಗಿನ ಪ್ಯಾರಾದಲ್ಲಿ ನೋಡೋಣ.

**“ಸರಿಯಾದ ಮಾರ್ಗ ಸಿಗದೆ, ಸದಾಚಾರ್ಯನು ಲಭಿಸದೆ ಸತ್ಸಾಂಗತ್ಯವಿಲ್ಲದೆ, ಶಾಸ್ತ್ರೀಯ ಪರಿಚಯವಿಲ್ಲದೆ, ಕುಮತ ಪ್ರವಿಷ್ಟರಾಗಿ ಪರದಾಡುತ್ತಾ ಮತ್ತೊಂದು ಗುಂಪಿನವರಿದ್ದಾರೆ. 1) ನೋಡಲು ಸುಂದರ ಹುಡುಗಿ ಮೇಲಿನ ಕೊನೆಯ ಮಹಡಿ ಮನೆಯಲ್ಲಿದ್ದಾಳೆ. ಏಳು ಬಣ್ಣದ ಸರೋವರದಲ್ಲಿ ಜಲಕ್ರೀಡೆಗಳಾಡುತ್ತಿದ್ದಾಳೆ. 2) ರೆಕ್ಕೆ ಪುಕ್ಕ ಇಲ್ಲದ ಪಕ್ಷಿ ರಾತ್ರಿ ಹಗಲು ತಪಸ್ಸು ಮಾಡಿ ಒಂದು ಕೆರೆಯ ಮೀನುಗಳನ್ನೆಲ್ಲಾ ಒಂದೇ ನುಂಗಿತು. 3) ಹೋಗುತ್ತಾ ಹೋಗುತ್ತಾ ಗೋಡೆಯಿದೆ, ಗೋಡೆಗೆ ತಕ್ಕ ಗೂಡು ಇದೆ, ಗೂಡಿಗೆ ತಕ್ಕ ದೀಪವಿದೆ. 4) ಚಪ್ಪಲಿಯಲ್ಲಿನ ಕಲ್ಲು ಕಿವಿಯಲ್ಲಿನ ಗುಂಗಾರಿ ಕಣ್ಣಿನಲ್ಲಿನ ಧೂಳು ಕಾಲಿನ ಮುಳ್ಳು ಮನೆಯಲ್ಲಿನ ಕಲಹ ಇಷ್ಟಿಷ್ಟು ಅಲ್ಲವಯ್ಯ ವಿಶ್ವಾದಾಭಿರಾಮ ಕೇಳಯ್ಯ ವೇಮ. 5) ಹನ್ನೆರಡು ಕೊಂಬೆಗಳ ಆರಳಿ ಮರ, ಅದರ ಮೇಲೆ ಪಂಚರಂಗಿನ ಗಿಳಿ, ಅದರ ಮೇಲೆ ನರಿಯಂತೆ ಪ್ರಕಾಶಿಸುವ ನಕ್ಷತ್ರ, ಅದರಲ್ಲಿಯೇ ರಹಸ್ಯವಿದೆ. 6) ಗುಂಟೂರಿನ ಆ ಕಡೆಗಿರುವ ಚಿಂತಲದತ್ತ ಕುದುರೆ ಹೊಟ್ಟೆಯಲ್ಲಿ ಕುರಿ ಹುಟ್ಟಿತಯ್ಯ ನಂದಾಮಯಾ ಗುರುಡ ನಂದಾಮಯಾ ಆನಂದದೇವಿಗೆ ನಂದಾಮಯಾ. ಇವು ಇವರ ಉಪನಿಷತ್ ಸೂಕ್ತಗಳು ತತ್ತ್ವ ವಾಚಕಗಳು. ಇವುಗಳಿಗೇನೋ ಅಂತರಾರ್ಥವಂತೆ ಇವರ ಶ್ರಾದ್ಧವಂತೆ”**

ಮೇಲಿನ ವಿಷಯ ನೋಡಿದರೆ ಬರೆದ ಗ್ರಂಥಕರ್ತ ಬೇರೆಯವರ ಬೆಲೆಯನ್ನು, ಅವರು ಹೇಳಿದ ವಿಧಾನವನ್ನು ಗ್ರಹಿಸದೆ ಕೇವಲ ಅನುಮಾನ

ದಿಂದ ಅವಮಾನವಾಗಿ ಮಾತನಾಡಿದ ಮಾತುಗಳೆಂದು ತಿಳಿಯುತ್ತಿದೆ. ಶರೀರವು ದೇವಾಲಯ, ಶರೀರದಲ್ಲಿನ ಆತ್ಮವೇ ದೇವರೆಂದು ಶಾಸ್ತ್ರವು ಹೇಳಿರುವಾಗ, ಅದು ತಿಳಿಯದೆ ಹೊರಗಿರುವ ವೈದಿಕ ನಿಷ್ಠೆಯನ್ನು ಹಿಡಿದುಕೊಂಡು ಪರದಾಡುವವರಿಗೆ ಆತ್ಮ ಜ್ಞಾನಹೊಂದಿದರು ಅವರ ವಾಕ್ಯಗಳು ಅರ್ಥ ಆಗುವುದಿಲ್ಲ. ಕಣ್ಣು ಕವಚವನ್ನು ಹಾಕಿದ ಕುದುರೆ ಕಣ್ಣುಗಳಿಗೆ ಪಕ್ಕದ ದೃಷ್ಟಿ ಇಲ್ಲದಂತೆ ಮುಂದಿನ ದಾರಿ ಕಾಣಿಸುವಂತೆ ಕಣ್ಣು ಚಿಪ್ಪಿಗಳು ಕಟ್ಟಿರುತ್ತಾರೆ. ಕಣ್ಣುಚಿಪ್ಪಿಗಳಿರುವ ಕುದುರೆ ಎದುರಿಗಿರುವ ದಾರಿ ಹೊರತು ಪಕ್ಕದ ದೃಶ್ಯ ಕಾಣದಿರುವುದರಿಂದ ಪಕ್ಕದ ದೃಶ್ಯಗಳನ್ನು ನೋಡಲಾರದು. ಹಾಗೆ ವೈದಿಕ ನಿಷ್ಠೆಗಳೆಂಬ ಕಣ್ಣುಚಿಪ್ಪಿಗಳಿರುವುದರಿಂದ ಅನುಷ್ಠಾನಗಳು ಹೊರತು ಉಳಿದ ಆತ್ಮಜ್ಞಾನಿಗಳನ್ನು ಗ್ರಹಿಸಲಾರದ ಸ್ಥಿತಿ ಕೆಲವರಿಗೆ ಇರುತ್ತದೆ. ಅಂತಹವರು ಬರೆದಿರುವವೇ ಮೇಲಿನ ವಾಕ್ಯಗಳು. ಶರೀರಾಂತರ್ಗತ ವಿವರವನ್ನು ಅದರಲ್ಲಿನ ದೈವವನ್ನು ಹೋಲಿಸಿ ಬರೆದ ವಿಶೇಷ ಜ್ಞಾನವನ್ನು ಗ್ರಹಿಸದೆ, ಹೇಳನವಾಗಿ ಮಾತನಾಡಿದ ಗ್ರಂಥಕರ್ತ ದೊಡ್ಡ ಹೆಸರಿರುವ ವೇದಾಂತಿ, ಆದರೂ ಆಸ್ತಿಕನು ಅಲ್ಲವೆಂದು ಜ್ಞಾನಧನ ಇಲ್ಲದ ನಾಸ್ತಿಕನೆಂದು ಹೇಳಬಹುದು.

ಕೆಲವರು ಕಾಶೀಗೆ ಹೋಗಿ ಸಂಸ್ಕೃತ ವಿದ್ಯೆಯನ್ನು ಕಲಿತು, ವೇದ ಪಾರಾಯಣ ಮಾಡಿ, ಭಾಷಾ ಪಾಂಡಿತ್ಯ ಇರುವ ಸ್ವಾಮಿಗಳಾಗಿ ತಯಾರಾಗುತ್ತಿದ್ದಾರೆ. ವೇದಗಳು ಓದಿದವನೆ ಸ್ವಾಮಿ, ಗುರು ಎನ್ನುವ ಉದ್ದೇಶ ಅವರಲ್ಲಿರುವುದರಿಂದ ವೇದಪಾಂಡಿತ್ಯ ಇಲ್ಲದವರನ್ನು ಕಡಿಮೆಯಾಗಿ ನೋಡುತ್ತಿರುತ್ತಾರೆ. ಅವರ ಮಾತುಗಳಲ್ಲಿಯೇ ವೇದಗಳು ದೊಡ್ಡವೆಂದು ಹೇಳುತ್ತಾ ವೇದಗಳು ಅಪೌರುಷಯಗಳು ಎನ್ನುತ್ತಿದ್ದಾರೆ. ವೇದಗಳು ಮನುಷ್ಯರು ಬರೆದಿರುವವು ಅಲ್ಲ, ದೇವರೆ ಅವುಗಳನ್ನು ಸೃಷ್ಟಿಸಿದ್ದಾನೆಂದು ಅವರ ವಾದನೆಯಲ್ಲಿನ ಅರ್ಥ. ವೇದಗಳು ಅಪೌರುಷಗಳು ಎನ್ನುವುದರಲ್ಲಿ ವೇದಗಳನ್ನು ಪುರುಷನಾದ ದೇವರ ಬಗ್ಗೆ ಹೇಳಲಿಲ್ಲ, ಸ್ತ್ರೀ ಆದ ಪ್ರಕೃತಿಯ ಬಗ್ಗೆ ಹೇಳಿರುವವೆಂದು ಅರ್ಥವೇಕೆ ತೆಗೆದುಕೊಳ್ಳಬಾರದೆಂದು ನಮ್ಮ ವಾದನೆ. ಹಾಗೆ ವೇದಗಳು ಪುರುಷ ನಾದ ಪರಮಾತ್ಮ ಹೇಳಲಿಲ್ಲ. ಸ್ತ್ರೀ ತತ್ವವಾದ ಪ್ರಕೃತಿಯಿಂದ

ಹೇಳಲ್ಪಟ್ಟಿವೆಯೆಂದೂ ಏಕೆ ಅರ್ಥ ಮಾಡಿಕೊಳ್ಳಬಾರದೆಂದು ಕೇಳುತ್ತಿದ್ದೇವೆ. ಬ್ರಹ್ಮವಿದ್ಯೆಗೆ ಪ್ರಮಾಣವಾದ ಭಗವದ್ಗೀತಾ ಶಾಸ್ತ್ರದಲ್ಲಿ ಗುಣತ್ರಯ ವಿಭಾಗಯೋಗದಲ್ಲಿ 5ನೇ ಶ್ಲೋಕದಲ್ಲಿ **"ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ"** ಸತ್ತ್ವ ಗುಣ, ರಜೋ ಗುಣ, ತಮೋಗುಣ ಎನ್ನುವ ಮೂರು ಗುಣಗಳು ಪ್ರಕೃತಿಗೆ ಹುಟ್ಟಿವೆ, **"ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈ ಗುಣ್ಯೋ"** ವೇದಗಳಲ್ಲಿ ಮೂರು ಗುಣಗಳ ವಿಷಯಗಳೇ ಇವೆ, ಅವುಗಳನ್ನು ಬಿಡು ಎಂದು ಇದೆ. ಗುಣಗಳು ಪ್ರಕೃತಿ ಸಂಭವಗಳು ಅವುಗಳೇ ವೇದಗಳು ಎಂದು ದೇವರೇ ಹೇಳಿರುವಾಗ, ದೇವರ ಜ್ಞಾನವನ್ನು ಬಿಟ್ಟು ವೇದಗಳನ್ನು ದೊಡ್ಡದಾಗಿ ಹೇಳಿಕೊಳ್ಳುವವರು ಆಸ್ತಿಕರಾಗುತ್ತಾರಾ.? ಪ್ರಕೃತಿಯನ್ನು ಸಹ ನಾನೇ ಹುಟ್ಟಿಸಿದ್ದೇನೆ. ಅದು ಗುಣರೂಪವಾದ ಮಾಯೆಯಾಗಿದೆ ಎಂದು ಗೀತೆಯಲ್ಲಿಯೇ ಹೇಳಲ್ಪಟ್ಟಿದೆ. ಇಷ್ಟು ವಿಧಗಳು ಹೇಳಿದರೂ ಬ್ರಹ್ಮವಿದ್ಯೆಗೇ ಪ್ರಮಾಣವಾದ ದೇವರ ಗೀತೆಯನ್ನು ಬಿಟ್ಟು ಮಾಯೆಗೆ ಪ್ರತಿರೂಪಗಳಾದ ಗುಣಮಯವಾದ ವೇದಗಳನ್ನು ಆಶ್ರಯಿಸುವವರು ಆಸ್ತಿಕರಾಗುತ್ತಾರಾ.? ಹೀಗೆ ವಿವರಿಸುತ್ತಾ ಹೋದರೆ ಈಗ ಆಸ್ತಿಕರನ್ನುವವರಲ್ಲಿಯೂ ನಾಸ್ತಿಕತ್ವ ಹೊರತು ಆಸ್ತಿಕತ್ವವು ಕಾಣಿಸುವುದಿಲ್ಲ. ಇನ್ನು ಹೇತುವಾದಿಗಳನ್ನು ವಿವರಿಸಿಕೊಳ್ಳೋಣ.



# ನೀವು ಹೇತುವಾದಿಗಳಾ? ಅಹೇತುವಾದಿಗಳಾ?

ಒಂದು ವಿಷಯವನ್ನು ಕುರಿತಾಗಲಿ, ಒಂದು ಪದಾರ್ಥವನ್ನು ಕುರಿತಾಗಲಿ ಸಂಪೂರ್ಣವಾಗಿ ತಿಳಿದಾಗ ಆ ವಿಷಯವನ್ನು ವಿವರಿಸಿ ಹೇಳುವುದಕ್ಕೆ ಸಾಧ್ಯವಾಗುತ್ತದೆ. ಅವುಗಳಲ್ಲಿನ ಲಾಭನಷ್ಟಗಳನ್ನು, ತಪ್ಪೊಪ್ಪುಗಳನ್ನು ವಿಶದೀಕರಿಸಿ ಹೇಳುವುದಕ್ಕೆ ಸಾಧ್ಯವಾಗುತ್ತದೆ. ಉದಾಹರಣೆಗೆ ಒಬ್ಬನು ನಾಲ್ಕು ವಿಧದ ಸಸಿಗಳನ್ನು ತೋರಿಸಿ, ಇದು ಇಂತಹ ಸಸಿ ಎಂದು ಹೆಸರು ಹೇಳಿ, ಈ

ಸಸಿಯ ಎಲೆಗಳು ಇಂತಹ ರೋಗವನ್ನು ಗುಣಪಡಿಸುವುದಕ್ಕೆ ಉಪಯೋಗ ಪಡುತ್ತದೆ ಎಂದು ತಿಳಿಸಿದ್ದಾನೆ ಎಂದುಕೊಳ್ಳೋಣ. ಆಗ ಅದು ಸತ್ಯನಾ ಅಸತ್ಯನಾ ಎಂದು ತೀರ್ಮಾನಿಸಿ ಹೇಳುವುದಕ್ಕೆ ಆ ಸಸಿಗಳ ವಿಷಯ ತಿಳಿದಿರಬೇಕು. ಸಸಿಗಳ ಹೆಸರನ್ನು ಹಿಂದೆಂದು ಕೇಳದವನು, ಸಸಿಗಳ ಆಕಾರವನ್ನು ಹಿಂದೆ ಎಂದು ನೋಡದವನು, ಇವು ಇಂತಹ ಸಸಿಗಳು ಅಲ್ಲವೆಂದು ಹೇಳುವುದಕ್ಕೆ ಸಾಧ್ಯವಿಲ್ಲ ಮತ್ತು ಇಂತಹ ಸಸಿಗಳೆಂದು ಹೇಳುವುದಕ್ಕೂ ಸಹ ಸಾಧ್ಯವಿಲ್ಲ. ಹಾಗೆ ಅವುಗಳ ಕೆಲಸದ ಬಗ್ಗೆಯೂ ಸಹ ಹೇಳಲಾರನು. ವಿಷಯದ ಅವಗಾಹನೆ ಇಲ್ಲದಿರುವಾಗ ಅದರ ಬಗ್ಗೆ ಮಾತನಾಡುವ ಹಕ್ಕು ಇಲ್ಲ ಎಂದು ಹೇಳಬಹುದು. ವಿಷಯ ಜ್ಞಾನ ತಿಳಿದವನೇ ಆ ವಿಷಯದ ಬಗ್ಗೆ ಮಾತನಾಡಬೇಕು. ತಿಳಿಯದವನು ವಿಷಯಜ್ಞಾನದ ಬಗ್ಗೆ ತಿಳಿದುಕೊಳ್ಳಬೇಕು.

ಕೆಲವರು ಕೆಲವು ವಿಷಯಗಳನ್ನು ಸಂಪೂರ್ಣವಾಗಿ ತಿಳಿದಿದ್ದು ಉಳಿದ ವಿಷಯಗಳು ತಿಳಿಯದಿದ್ದರೂ, ತಿಳಿದಂತೆ ಮಾತನಾಡುತ್ತಿರುತ್ತಾರೆ. ಉದಾಹರಣೆಗೆ ಕಲ್ಲಿನ ಬಗ್ಗೆ ತಿಳಿದವನು ರತ್ನಗಳ ಬಗ್ಗೆ ತಿಳಿಯದಿದ್ದರೂ ಅದರ ಬಗ್ಗೆ ಮಾತ ನಾಡುವುದು ಅವಿವೇಕ ಅಲ್ಲವೆ! ಹಾಗೆಯೇ ಪ್ರಪಂಚ ಓದುಗಳು ಸಂಪೂರ್ಣವಾಗಿ ಓದಿದವರು ಪರಮಾತ್ಮ ಓದನ್ನು ಕುರಿತು ಮಾತನಾಡುವುದು ಸರಿಯಾದ ಕೆಲಸವಾ? ಯಂ.ಎ. ಫಿಲಾಸಫಿ (ಎಮ್.ಎ. ಪಿಹೆಚ್.ಡಿ) ಓದಿದ ಮಾತ್ರಕ್ಕೆ ದೇವರ ಜ್ಞಾನದ ಬಗ್ಗೆ ಮಾತನಾಡುವುದಕ್ಕೆ ಅರ್ಹನಾ? ಈ ವಿಧವಾಗಿ ಯೋಚಿಸಿದರೆ ಒಂದು ವಿಷಯದ ಬಗ್ಗೆ ಸಂಪೂರ್ಣವಾಗಿ ತಿಳಿದಾಗಲೇ ಅದರ ಬಗ್ಗೆ ಸಹೇತುಕವಾಗಿ ಮಾತನಾಡಬಹುದು ಎನ್ನುವುದು ಸೂತ್ರ. ತಿಳಿಯದೆ ಮಾತನಾಡಿದಾಗ ಆ ವಿಷಯವು ಹೇತುಬದ್ಧವಾಗಿರುವುದಿಲ್ಲ. ಏನನ್ನಾದರೂ ಅವಗಾಹನೆ ಇಲ್ಲದೆ ಮಾತನಾಡಿದಾಗ ಅದು ಅನುಮಾನವೇ ಹೊರತು ಪ್ರಮಾಣ ಅಲ್ಲವೆಂದು ಹೇಳಬಹುದು. ಏನನ್ನಾದರೂ ಪ್ರಮಾಣ ಇಲ್ಲದಂತೆ, ಅನುಮಾನದಿಂದ ಮಾತನಾಡುವುದನ್ನು ಅವಮಾನಿಸಿದಂತೆ ಆಗುತ್ತದೆ.

ಹೇತು ಎಂದರೆ ಕಾರಣ. ಹೇತುವಾದ ಎಂದರೆ ವಾಸ್ತವ ಕಾರಣದ ಬಗ್ಗೆ ಕೇಳುವುದು, ಅಂದರೆ ಒಂದು ವಿಷಯದಲ್ಲಿನ ಕಾರಣವನ್ನು ಕೇಳುವುದು ಎಂದು ಅರ್ಥ. ಕಾರಣಕ್ಕಿರುವ ವಿವರವನ್ನು ಹೇಳುವುದೆ ಪ್ರಶ್ನೆಗೆ ತಕ್ಕ ಉತ್ತರ ಎನ್ನಬಹುದು. ಯಾವ ಪ್ರಶ್ನೆಯಾದರೂ ಶಾಸ್ತ್ರವನ್ನು ಅನುಸರಿಸಿ ಕೇಳಿದಾಗ ಸಹೇತುಕವಾಗುತ್ತದೆ. ಹಾಗೆ ಉತ್ತರ ಸಹ ಶಾಸ್ತ್ರಸಮ್ಮತವಾಗಿ ಇದ್ದಾಗಲೇ ಹೇತುಬದ್ಧವಾಗುತ್ತದೆ. ಆದ್ದರಿಂದ ಪ್ರಶ್ನಿಸುವಾಗಾಗಲಿ, ಉತ್ತರ ಹೇಳುವಾಗಾಗಲಿ, ಶಾಸ್ತ್ರಬದ್ಧತೆ ಇದೆಯೋ ಇಲ್ಲವೋ ನೋಡಿಕೊಳ್ಳಬೇಕಾಗಿರುತ್ತದೆ. ಶಾಸ್ತ್ರ ಎಂದರೆ ಏನೆಂದು ಕೆಲವರಿಗೆ ಪ್ರಶ್ನೆಬರಬಹುದು. **ಶಾಪ ಎನ್ನುವ ಪದದಿಂದ ಶಾಸ್ತ್ರ ಎನ್ನುವ ಪದವು, ಶಾಸನ ಎನ್ನುವ ಪದಗಳು ಹುಟ್ಟಿವೆ.** ಹೇಳಿದಂತೆ ತಪ್ಪದೆ ನಡೆಯುವುದು ಶಾಸನ ಅಥವಾ ಶಾಸ್ತ್ರ ಅಥವಾ ಶಾಪ ಎನ್ನಬಹುದು. ಇದನ್ನೆ ವಿಜ್ಞಾನ ಅನ್ನಬಹುದು. ಉದಾಹರಣೆಗೆ ಬೆಂಗಳೂರಿನಿಂದ ಹೈದರಾಬಾದ್‌ಗೆ 565 ಕೀಲೋಮೀಟರ್‌ಗಳು ದೂರವಿದೆ ಎಂದು ಒಂದು ಬೋರ್ಡ್ ಮೇಲೆ ಬರೆಯಲ್ಪಟ್ಟಿದೆ. ಅದನ್ನು ಓದಿ, ಇಷ್ಟು ದೂರವಿದೆ ಎಂದು ತಿಳಿಯುವುದು ಜ್ಞಾನ ಆಗುತ್ತದೆ. 565 ಕಿಲೋಮೀಟರ್‌ಗಳು ಪ್ರಯಾಣ ಮಾಡಿ ಹೈದರಾಬಾದನ್ನು ಸೇರಿ ಬೋರ್ಡು ಮೇಲೆ ಹೇಳಿದ ಹೈದರಾಬಾದನ್ನು ನೋಡುವುದನ್ನು ಅಥವಾ ಅನುಭವಪೂರ್ವಕವಾಗಿ ತಿಳಿದುಕೊಳ್ಳುವುದನ್ನು ವಿಜ್ಞಾನ ಎನ್ನುತ್ತೇವೆ. ಜ್ಞಾನವನ್ನು ವಿವರವೆಂದು, ಅನುಭವವನ್ನು ವಿಜ್ಞಾನವೆಂದು ಹೇಳಬಹುದು. ಬೆಂಗಳೂರಿನಿಂದ ಹೈದರಾಬಾದ್ ಎಷ್ಟು ದೂರ ಇದೆ ಎಂದು ಪ್ರಶ್ನಿಸುವುದು ಒಂದು ಪ್ರಶ್ನೆ. ಅದಕ್ಕೆ ಬದುಲು 565 ಕಿಲೋಮೀಟರ್‌ಗಳು ದೂರ ಇದೆ ಎಂದು ನಿಜವನ್ನು ಹೇಳುವುದು ಒಂದು ಉತ್ತರ. ಪ್ರಶ್ನೆಗೆ ಆ ಉತ್ತರ ಸರಿಯಾದುದ್ದೋ ಅಲ್ಲವೋ ಒಂದು ಬಾರಿ ಆ ದೂರವನ್ನು ಅನುಭವರೀತ್ಯಾ ಪ್ರಯಾಣಿಸಿದವನು ಮಾತ್ರವೆ ತೀರ್ಮಾನಿಸಿ ಹೇಳಬಲ್ಲನು. ಅದನ್ನೇ ವಿಜ್ಞಾನ ಎನ್ನುತ್ತೇವೆ. ವಿಜ್ಞಾನ ಇರುವವನಿಗೆ ಪ್ರಶ್ನೆ ಮತ್ತೆ ಉತ್ತರ ಸರಿಯಾದುದೋ ಅಲ್ಲವೋ ತಿಳಿಯುತ್ತದೆ. ವಿಜ್ಞಾನ ಎನ್ನುವುದನ್ನು ವಿವರಿಸಿಕೊಂಡರೆ ಈ ವಿಧವಾಗಿದೆ.

ವಿಜ್ಞಾನವನ್ನು ವಿಭಜಿಸಿಕೊಂಡು ನೋಡಿದರೆ ಎಲ್ಲರಿಗೂ ತಿಳಿಯುವಂತೆ ಐದು ವಿಧಗಳಾಗಿದೆ. ಎಲ್ಲರಿಗೂ ತಿಳಿಯದಂತಿರುವುದಕ್ಕೆ ಒಂದು ವಿಧವೂ ಸಹ ಇದೆ. ಒಟ್ಟಾರೆ ವಿಜ್ಞಾನಗಳು ಆರು ವಿಧಗಳೆಂದು ಹೇಳಬಹುದು. ಎಲ್ಲರಿಗೂ ತಿಳಿಯುವಂತೆ, ಎಲ್ಲರೂ ಒಪ್ಪಿಕೊಳ್ಳುವಂತಿದ್ದರು ಐದು ವಿಜ್ಞಾನಗಳನ್ನು ಕೂಡಿಸಿ ಇಂಗ್ಲೀಷಿನಲ್ಲಿ ಒಂದು ಹೆಸರು ಇಟ್ಟಿದ್ದಾರೆ, ಅದೇ ಸೈನ್ಸ್. ಆಂಗ್ಲ ಭಾಷೆಯಲ್ಲಿ ಸೈನ್ಸ್ ಎಂದರು ಕನ್ನಡ ಭಾಷೆಯಲ್ಲಿ ವಿಜ್ಞಾನ ಎಂದರೂ ಎರಡೂ ಒಂದೇ. ಪ್ರಯೋಗದ ಮೂಲಕ ನಿರೂಪಿಸಲ್ಪಡುವುದು ಸೈನ್ಸ್ ಹಾಗೆಯೇ ಮಾಡಿದಾಗ ಅನುಭವಕ್ಕೆ ಬರುವುದು ಸೈನ್ಸ್. ಐದು ವಿಧಗಳ ಸೈನ್ಸ್‌ಗಿಂತ ಆರನೇ ವಿಧದ ಸೈನ್ಸ್ ಇದೆ. ಅದನ್ನೇ ಸೈನ್ಸ್‌ಗಳಿಗೆಲ್ಲಾ ಸೂಪರ್ ಸೈನ್ಸ್ ಎಂದು ಹೇಳುತ್ತೇವೆ.

ಆರನೆಯ ಸೈನ್ಸನ್ನೇ ಯೋಗಶಾಸ್ತ್ರ ಅಥವಾ ಬ್ರಹ್ಮವಿದ್ಯಾಶಾಸ್ತ್ರ ಎನ್ನುತ್ತೇವೆ. ಇಂಗ್ಲೀಷ್ ಭಾಷೆಯಲ್ಲಿ ಫಿಲಾಸಫಿ ಎಂದು ಸಹ ಹೇಳುತ್ತಾರೆ. ಫಿಲಾಸಫಿ ಎಂದರೆ ಆಲ್ ಸೈನ್ಸ್ ಆಫ್ ಸೈನ್ಸ್ ಎಂದೂ ಸಹ ಹೇಳುತ್ತಾರೆ. ಈಗಿನ ಕಾಲದಲ್ಲಿ ಐದು ವಿಜ್ಞಾನಗಳಲ್ಲಿ ಯಾವುದೋ ಒಂದರಲ್ಲಿ, ಒಂದು ಯಥಾರ್ಥ ವಿಷಯಗಳನ್ನು ವಿಜ್ಞಾನದ ಪ್ರಕಾರ ಕಂಡುಹಿಡಿದು ನಿರೂಪಿಸಿದಾಗ, ಕಂಡುಹಿಡಿದವನಿಗೆ ಡಾಕ್ಟರ್ ಆಫ್ ಫಿಲಾಸಫಿ (ಫಿಹೆಚ್.ಡಿ) ಎಂದು ಸರ್ಟಿಫಿಕೆಟ್ ಕೊಡುತ್ತಿದ್ದಾರೆ. ಅಲ್ಲಿಗೆ ಆತನು ಮೇಧಾವಿಗಳಲ್ಲಿ ಸೇರಿಹೋಗಿದ್ದೇನೆಂದು ತಿಳಿದುಕೊಳ್ಳುತ್ತಿದ್ದಾನೆ. ಆದರೆ ಕಂಡುಹಿಡಿದಿರುವುದು ಶಾಸ್ತ್ರದಲ್ಲಿನ ಒಂದು ಭಾಗವೇ ಎಂದು ತಿಳಿಯದೆ, ಶಾಸ್ತ್ರಗಳೆಲ್ಲವೂ ತಿಳಿದಂತೆ ಸರ್ಟಿಫಿಕೆಟ್ ಪಡೆಯುತ್ತಿದ್ದಾರೆ. ಯಾವ ಶಾಸ್ತ್ರದಲ್ಲಿ ಪ್ರಾವೀಣ್ಯತೆ ಇದ್ದು ಆ ಶಾಸ್ತ್ರದಲ್ಲಿ ಹೊಸ ವಿಷಯವನ್ನು ಕಂಡುಹಿಡಿದಿದ್ದರೆ, ಡಾಕ್ಟರ್ ಆಫ್ ಎಂದು ಕೊನೆಗೆ ಆ ಶಾಸ್ತ್ರದ ಹೆಸರು ಇಡಬೇಕು. ಆದರೆ ನೇರವಾಗಿ ಡಾಕ್ಟರ್ ಆಫ್ ಫಿಲಾಸಫಿ ಎಂದು ಇಡುವುದು ಇಲ್ಲದಿರುವುದನ್ನು ಇಟ್ಟುಕೊಂಡಂತೆ ಎಂದು ನಮ್ಮ ಅಭಿಪ್ರಾಯ. ಫಿಲಾಸಫಿ ಎನ್ನುವುದು ಪ್ರತ್ಯೇಕವಾದದ್ದು. ಕಂಡುಹಿಡಿದ ವಿಷಯಕ್ಕೂ ಅದಕ್ಕೂ ಸಂಬಂಧವಿಲ್ಲ. ಆದರೂ ಮೇಧಾವಿಗಳು ಏಕೆ ಆ ಹೆಸರು ಇಟ್ಟುಕೊಂಡಿದ್ದಾರೋ

ತಿಳಿದಿಲ್ಲ. ಒಂದು ವಿಧವಾಗಿ ಪ್ರಕೃತಿಗೆ ಸಂಬಂಧಿಸಿದ ಐದು ಶಾಸ್ತ್ರಗಳಲ್ಲಿ ಯಾವುದನ್ನು ಪರಿಶೋಧಿಸಿ ಒಂದು ಹೊಸ ಸಿದ್ಧಾಂತವನ್ನು ಕಂಡುಹಿಡಿದರೂ, ಹೆಸರಿನ ಕೊನೆಯಲ್ಲಿ ಪಿ.ಹೆಚ್.ಡಿ (P.hd) ಎಂದು ಇಟ್ಟುಕೊಳ್ಳುವುದು ಅಸಮಂಜಸವೆ ಎಂದು ಹೇಳಬಹುದು. ಒಂದು ಯೋಗಶಾಸ್ತ್ರ ತಿಳಿದವರು, ಅದರಲ್ಲಿನ ಹೊಸ ಸಿದ್ಧಾಂತಗಳನ್ನು ಕಂಡುಹಿಡಿದು ವಿವರಿಸಿದಾಗ ಅವರನ್ನು ಮಾತ್ರ ಡಾಕ್ಟರ್ ಆಪ್ ಫಿಲಾಸಫಿ ಎನ್ನಬಹುದು.

ಗುಂಪಿನಲ್ಲಿ ಗೋವಿಂದ ಎನ್ನುವಂತೆ, ನಾಲ್ಕು ಜನರೊಂದಿಗೆ ನಾರಾಯಣ ಎಂದಂತೆ ಹೆಸರಿನ ಕೊನೆಯಲ್ಲಿ (P.hd) ಇಟ್ಟುಕೊಂಡರು ಪರವಾಗಿಲ್ಲ. ಆದರೆ ಎಲ್ಲ ಶಾಸ್ತ್ರಗಳು ತಿಳಿದಿದೆ ಎಂದು, ಇತರ ಶಾಸ್ತ್ರದಲ್ಲಿನ ವಿಷಯಗಳನ್ನು ವಿಮರ್ಶಿಸುವುದು ಸರಿಯಲ್ಲ. ಶಾಸ್ತ್ರಗಳಿಗೆಲ್ಲ ಶಾಸ್ತ್ರವಾದ, ವಿಜ್ಞಾನಗಳೊಂದರ ವಿಜ್ಞಾನವಾದ ಬ್ರಹ್ಮಾವಿದ್ಯಾಶಾಸ್ತ್ರ (ಯೋಗಶಾಸ್ತ್ರ)ವನ್ನು ಕುರಿತು ವಿಮರ್ಶಿಸಿ ಮಾತನಾಡುವುದು ಬಹಳ ತಪ್ಪಾಗುತ್ತದೆ. ಒಂದರ ಬಗ್ಗೆ ಸಂಪೂರ್ಣವಾಗಿ ತಿಳಿದಾಗಲೇ ಅದನ್ನು ಕುರಿತು ಪ್ರಶ್ನಿಸುವ ಹಕ್ಕು ಹೊಂದಿರುತ್ತೇವೆ. ತಿಳಿಯದಿದ್ದರೂ ಪ್ರಶ್ನಿಸಿದಾಗ, ಕರು ಮಾರುದ್ದಾ, ದಂಟು ಬಾರುದ್ದ ಅಲ್ಲವೇ ಅನ್ನುವಂತೆ ಸಪ್ಪೆದಂಟು ಪ್ರಶ್ನೆ ಆಗುತ್ತದೆ. ಈಗಿನಕಾಲದಲ್ಲಿ ಮೆಧಾವಿಗಳೆಂದುಕೊಳ್ಳುವವರು ಬಹಳ ಜನ ಹೇತುವಾದಿಗಳು ಎಂದುಕೊಂಡು ತಮಗೆ ತಿಳಿಯದ ಯೋಗ ಶಾಸ್ತ್ರದ ಬಗ್ಗೆ ಪ್ರಶ್ನಿಸುತ್ತಿದ್ದಾರೆ. ಅವರ ವಾದದಲ್ಲಿ ಮುಖ್ಯ ಸೂತ್ರ, ನಂಬಿಕೆ ಎನ್ನುವುದು ಸೈನ್ಸ್ ಅಲ್ಲವೆಂದು, ಯಥಾರ್ಥವಾಗಿ ಕಾಣಿಸುವುದೇ ಸೈನ್ಸ್ ಎಂದು, ಸೈನ್ಸ್ ಪ್ರಕಾರ ಇರುವವುಗಳನ್ನೇ ಒಪ್ಪಿಕೊಳ್ಳುತ್ತೇವೆಂದು, ನಂಬಿಕೆಯನ್ನು ಒಪ್ಪಿಕೊಳ್ಳುವುದಿಲ್ಲವೆಂದು ಹೇಳುತ್ತಿದ್ದಾರೆ.

ಕಾಣಿಸುವವೆಲ್ಲಾ ಸತ್ಯ ಅಲ್ಲವೆಂದು, ಕಾಣಿಸದಂತೆ ನಂಬಿಕೆಯ ಮೇಲೆ ಆಧಾರಪಟ್ಟಿರುವವು ಸಹ ಕೆಲವು ಸತ್ಯವೆಂದು ಅವರಿಗೆ ತಿಳಿಯದು. ಪ್ರತ್ಯಕ್ಷವಾಗಿ ಕಾಣಿಸುವುದರಲ್ಲಿಯೂ ಸಹ ಕೆಲವು ಅಸತ್ಯಗಳು ಅಡಗಿವೆ ಎಂದು, ಕೆಲವು ಕಾಣಿಸದ ನಂಬಿಕೆಗಳಲ್ಲಿ ಸಹ ಸತ್ಯಗಳಿವೆ ಎಂದು ಹೇಳುವುದೇ ನಿಜವಾದ

ಹೇತುವಾದ ಎಂದು ಹೇತುವಾದಿಗಳೆಂದುಕೊಳ್ಳುವವರಿಗೆ ತಿಳಿಯದು. ಕಾಣಿಸುವವೆಲ್ಲಾ ಸತ್ಯವಲ್ಲ, ನಂಬಿಕೆಗಳೆಲ್ಲವೂ ಅಸತ್ಯಗಳು ಅಲ್ಲ ಎನ್ನುವುದು ಹೇತುವಾದದಲ್ಲಿನ ಮುಖ್ಯ ಸೂತ್ರವಾದರೆ, ಆ ಸೂತ್ರಕ್ಕೆ ವಿಭಿನ್ನವಾಗಿ ತಮ್ಮ ಮನಸ್ಸಿನಲ್ಲಿ ಒಂದು ಹದ್ದನ್ನು ಏರ್ಪಡಿಸಿಕೊಂಡು, ನಂಬಿಕೆ ಎನ್ನುವುದನ್ನು ಖಂಡಿಸುವುದೆ ಹೇತುಬದ್ದತೆಯಿಲ್ಲದ ಹೇತುವಾದಿಗಳ ಕೆಲಸವಾಗಿದೆ.

ಕಣ್ಣಿಗೆ ಕಾಣಿಸುವವು ಅಸತ್ಯ ಹೇಗೆ ಆಗುತ್ತದೆ ಎಂದು ಕೆಲವರಿಗೆ ಪ್ರಶ್ನೆ ಬರಬಹುದು. ಅದಕ್ಕೆ ಉತ್ತರ ಏನೆಂದರೆ! ಚಂದ್ರನು ಎಲ್ಲರಿಗೂ ಒಂದು ಅಡಿ ಅಗಲವೇ ಕಾಣಿಸುತ್ತಿದ್ದಾನೆ. ಆದರೂ ಅದು ನಿಜವಲ್ಲ. ಬೇಸಿಗೆ ಕಾಲದಲ್ಲಿ ಕಿಲೋಮಿಟರ್ ದೂರದಲ್ಲಿ ನೀರು ಸಮಗ್ರವಾಗಿ ಇರುವಂತೆ ಕಾಣಿಸುತ್ತಿರುತ್ತದೆ. ಹಾಗೆ ಎಲ್ಲರಿಗೂ ಕಾಣಿಸಿದರೂ ಅದು ನಿಜವಲ್ಲ. ಭೂಮಿ ಅಂಚಿಗೆ ಆಕಾಶವು ಅಂಟಿಕೊಂಡಂತೆ ಕಾಣಿಸುತ್ತದೆ ಆದರೂ ಅದು ನಿಜವಲ್ಲ. ಹಾಗೆ ಕೇಳುವವೆಲ್ಲಾ ನಿಜ ಅಲ್ಲ ಎನ್ನುವುದಕ್ಕೆ ಉದಾಹರಣೆಯಾಗಿ ತುಪ್ಪದ ಹೀರೆಕಾಯಲ್ಲಿ ತುಪ್ಪ ಇರುವುದಿಲ್ಲ. ಸೋರೆಕಾಯಿಯಲ್ಲಿ ಸೋರೆ ಇರುವುದಿಲ್ಲ. ಪ್ರತ್ಯಕ್ಷವಾಗಿ ಎಲ್ಲರಿಗೂ ಕಾಣಿಸುವ, ಎಲ್ಲರಿಗೂ ಕೇಳಿಸುವವುಗಳಲ್ಲಿಯೂ ಸಹ ಸತ್ಯವಿಲ್ಲ ಎಂದು ತಿಳಿಯುತ್ತಿದೆ. ಈ ವಿಧವಾಗಿಯೇ ಮನುಷ್ಯರಿಗೆ ಇರುವ ನಂಬಿಕೆಯಲ್ಲಿ ಎಲ್ಲವು ಸತ್ಯವಲ್ಲ ಮತ್ತು ಎಲ್ಲವೂ ಅಸತ್ಯವು ಅಲ್ಲ. ಕಾಗೆ ಗೂಡಿನಲ್ಲಿರುವ ಮರಿಗಳೆಲ್ಲವನ್ನು ಕಾಗೆ ಮರಿಗಳೆಂದುಕೊಳ್ಳುವುದು ಸಹಜವೇ ಆದರೂ ಆ ಮರಿಗಳಲ್ಲಿ ಕೆಲವು ಕೋಗಿಲೆ ಮರಿಗಳು ಇರಬಹುದು. ಚಿಕ್ಕಂದಿನಲ್ಲಿ ಎಲ್ಲ ಒಂದೇ ರೀತಿಯಲ್ಲಿದ್ದರೂ ಸ್ವಲ್ಪ ಕಾಲಕ್ಕೆ ಅವು ನಾವು ಅಂದುಕೊಂಡಂತೆ ಎಲ್ಲ ಕಾಗೆಗಳೆ ಅಲ್ಲವೆಂದು ತಿಳಿಯುತ್ತದೆ. ಹಾಗೆಯೇ ಈದಿನ ಕೆಲವರು ಹೇತುವಾದಿಗಳಾಗಿ ಕಾಣಿಸುತ್ತಿದ್ದರೂ ಎಲ್ಲರೂ ನಿಜವಾದ ಹೇತುವಾದಿಗಳು ಅಲ್ಲ. ಅವರಲ್ಲಿ ಕೆಲವರು ಹೇತು ಇಲ್ಲದ ವಾದಿಗಳು ಸಹ ಇದ್ದಾರೆ. ಆ ವಿಧವಾಗಿಯೇ ನಂಬಿಕೆಗಳಲ್ಲಿ ಎಲ್ಲಾ ಮೂಢನಂಬಿಕೆಗಳು ಅಲ್ಲ, ಅವುಗಳಲ್ಲಿ ಕೆಲವು ದೊಡ್ಡ ಸತ್ಯಗಳು ಸಹ ಇರುತ್ತವೆ. ಆದ್ದರಿಂದ ನಂಬಿಕೆಯನ್ನು ಒಪ್ಪಿಕೊಳ್ಳುವುದಿಲ್ಲ ಎನ್ನುವ ಹೇತುವಾದಿಗಳ ಸೂತ್ರವು ಅಸಲು ಸಿಸಲಾದ ನಮ್ಮಂತಹ ಹೇತುವಾದಿಗಳು ಒಪ್ಪಿಕೊಳ್ಳುವುದಿಲ್ಲ.

ನಂಬಿಕೆಯನ್ನು ಒಪ್ಪಿಕೊಳ್ಳುವುದಿಲ್ಲ ಎನ್ನುವ ಸೂತ್ರ ಹೊಡೆದುಹಾಕಲ್ಪಡುತ್ತದೆ. ಕೆಲವು ನಂಬಿಕೆಗಳನ್ನು ತಪ್ಪದೆ ಒಪ್ಪಿಕೊಳ್ಳಬೇಕಾಗಿದೆ. ಹೇತುವಾದ ಶಾಸ್ತ್ರಬದ್ಧವಾದುದು, ಆದ್ದರಿಂದ ಕುರುಡರಂತೆ ಖಂಡಿಸುವವರನ್ನು ಹೇತುವಾದಿಗಳು ಅನ್ನಬಾರದು.

ನಾಸ್ತಿಕರು ದೇವರು ಇಲ್ಲ ಎನ್ನುತ್ತಿದ್ದಾರೆ, ಹೇತುವಾದಿಗಳು ಕಾಣಿಸದ ದೇವರು ನಂಬಿಕೆಯ ಮೇಲೆ ಆಧಾರ ಪಟ್ಟಿದ್ದಾನೆಂದು, ಸೈನ್ಸ್ ಪ್ರಕಾರ ನಂಬಿಕೆಗೆ ಸ್ಥಾನ ಇಲ್ಲವೆಂದು, ಆದ ಕಾರಣ ದೇವರು ಆಸ್ತಿಕರು ಕಲ್ಪಿಸಿಕೊಂಡ ಭ್ರಮೆಯೇಯಾಗಲಿ ನಿಜವಾಗಲು ಇಲ್ಲ ಎನ್ನುತ್ತಿದ್ದಾರೆ. ಅಷ್ಟೇ ಅಲ್ಲದೆ ಆರನೇ ಶಾಸ್ತ್ರವಾದ ಯೋಗಶಾಸ್ತ್ರ ಎಂದು ಹೆಸರವಾಸಿಯಾದ ಭಗವದ್ಗೀತೆಯನ್ನು ಕಲ್ಪಿತ ಎನ್ನುತ್ತಿದ್ದಾರೆ. ಆರೋಪಿಸುವುದಕ್ಕೇ ಪರಿಮಿತವಾದ ಹೇತುವಾದಿಗಳೆಂದುಕೊಳ್ಳುವವರು, ಅಸಲು ನಿಜವನ್ನು ಸ್ವಲ್ಪವೂ ಸಹ ಪರಿಶೀಲಿಸಿ ನೋಡುತ್ತಿಲ್ಲ. ದೇವರು ಇದ್ದಾನೆ ಎನ್ನುವವರೊಂದಿಗೆ ವಾದಕ್ಕೆ ಇಳಿಯುವುದಿಲ್ಲ ಅನ್ನುತ್ತಿದ್ದಾರೆ. ವಾದಕ್ಕೆ ಇಳಿದರೆ ಇಕ್ಕಟ್ಟಿನಲ್ಲಿ ಸಿಲುಕಿಕೊಂಡಂತೆ ಎಂದು, ಅವರನ್ನು ಒಪ್ಪಿಸಲಾರವೆಂದು, ತಿಳಿದುಕೊಂಡ ಹೇತುವಾದಿಗಳು ಎಲ್ಲಿಯೂ ಸಹ ಶಾಸ್ತ್ರಬದ್ಧವಾಗಿ ದೇವರು ಇಲ್ಲವೆಂದು ನಿರೂಪಿಸದೆ, ಸರಿಯಾದ ಕಾರಣಗಳನ್ನು ತೋರಿಸದೆ, ಆಸ್ತಿಕರಿಗೆ ವಿರುದ್ಧವಾಗಿ ಮಾತನಾಡುವುದೆ ತಮ್ಮ ಕೆಲಸವಾಗಿಟ್ಟುಕೊಂಡಿದ್ದಾರೆ. ಹೇತುವಾದಿಗಳು ಮಾತನಾಡುವವೆಲ್ಲ ಪ್ರಶ್ನೆಗಳ ರೂಪವಾಗಿ, ವಿಮರ್ಶೆಗಳ ರೂಪವಾಗಿರುತ್ತವೆ ಆಗಲಿ, ಯಾವುವು ಉತ್ತರ ರೂಪವಾಗಿಯೂ, ವಿವರಣೆಗಳ ರೂಪವಾಗಿ ಇರುವುದಿಲ್ಲ. ಅವರ ಪ್ರಶ್ನೆಗಳು 1) ಯಾರಾದರೂ ದೇವರನ್ನು ನೋಡಿದ್ದರೆ ನಮಗೆ ತೋರಿಸಿರಿ ಒಪ್ಪಿಕೊಳ್ಳುತ್ತೇವೆ. 2) ದೇವರಿದ್ದರೆ ನಮಗೇಕೆ ಕಾಣಿಸುತ್ತಿಲ್ಲ. 3) ದೇವರು ದೆವ್ವ ಎನ್ನುವವು ಆಸ್ತಿಕರು ಕಲ್ಪಿಸಿಕೊಂಡ ನಂಬಿಕೆಗಳು ಮಾತ್ರವೆ! ನಿರೂಪಣೆಗೆ ಬರುವುದಿಲ್ಲ. 4) ಮುಗಿದವರಿಗೆ ಕೋರಿಕೆಗಳು ತೀರಿಸುವ ದೇವರು ಮುಗಿಯದವರನ್ನು ಏನು ಮಾಡುತ್ತಿದ್ದಾನೆ. 5) ನಾವು ದೇವರನ್ನು ಒಪ್ಪಿಕೊಳ್ಳದಿರುವಾಗ ನಮ್ಮನ್ನು ಶಿಕ್ಷಿಸಲಿಲ್ಲವೇಕೆ. 6) ದೇವರಿದ್ದಾನೆಂದು ಹೇಳುವವರು ಪ್ರಜೆಗಳನ್ನು ತಪ್ಪುದಾರಿ ಹಿಡಿಸಿದಂತೆ ಅಲ್ಲವೆ! 7) ಅವರ

ನಂಬಿಕೆಯನ್ನು ಎಲ್ಲರ ಮೇಲೆ ತಿದ್ದುವುದೆ ಬೋಧನೆಗಳ ರೂಪದಲ್ಲಿ ಹೇಳುವುದು. ಈ ವಿಧವಾಗಿ ಎಷ್ಟೋ ವಿಮರ್ಶೆಗಳು ಮಾಡುತ್ತಿರುತ್ತಾರೆ.

ಆರನೇ ಶಾಸ್ತ್ರವಾದ ಯೋಗಶಾಸ್ತ್ರ ಏನೋ, ಅದರ ವಾಸ್ತವಿಕತೆ ಏನೋ, ಆಸ್ತಿಕರೆಂದುಕೊಳ್ಳುವವರಿಗೇ ಸರಿಯಾಗಿ ತಿಳಿಯದ ಕಾಲದಲ್ಲಿ ಹೇತುವಾದಿಗಳಿಗೆ ಉತ್ತರ ಹೇಳುವವರು ಇಲ್ಲದಿರಬಹುದು. ಹೇತುವಾದಿಗಳಿಗೆ ದೇವರ ವಿಷಯ ಅರ್ಥವಾಗಬೇಕೆಂದರೆ, ಫಿಲಾಸಫಿ ಎನ್ನುವುದು ಏನೋ ತಿಳಿಯಬೇಕೆಂದರೆ ಸ್ಥೂಲ ಸೂಕ್ಷ್ಮಗಳೆಂಬುವವು ತಪ್ಪದೆ ಅರ್ಥವಾಗಬೇಕು. ಉದಾಹರಣೆಗೆ ಸ್ವಲ್ಪ ವಿವರಿಸಿಕೊಳ್ಳೋಣ. ಒಂದು ಮನೆಯಲ್ಲಿ ಫ್ಯಾನ್‌ಗಳು ತಿರುಗುತ್ತಿವೆ, ಟಿ.ವಿಯಲ್ಲಿ ಗೊಂಬೆ ಕಾಣಿಸುತ್ತದೆ, ಮೋಟರ್ ಕೆಲಸ ಮಾಡುತ್ತಿದೆ. ಮನೆಯಲ್ಲಿ ಕೆಲಸ ಮಾಡುವ ಪರಿಕರಗಳು ಎಲ್ಲವೂ ಅನೇಕ ರೂಪಗಳಲ್ಲಿ ಅನೇಕ ವಿಧಗಳಾಗಿ ಕೆಲಸಗಳು ಮಾಡುವುದು ಎಲ್ಲರಿಗೂ ತಿಳಿದ ವಿಷಯವೆ. ಎಲ್ಲಾ ಪರಿಕರಗಳು ಕೆಲಸ ಮಾಡುವುದಕ್ಕೆ ಮುಖ್ಯವಾಗಿ ವಿದ್ಯುತ್ ಶಕ್ತಿ ಅವಶ್ಯಕ. ಸ್ಥೂಲವಾಗಿ ಪರಿಕರಗಳು ಕಾಣಿಸಿದರೂ, ಕಾಣಿಸದೆ ಸೂಕ್ಷ್ಮವಾಗಿರುವ ಕರೆಂಟು, ಕೆಲಸ ನಡೆಯುವುದಕ್ಕೆ ಅವಶ್ಯಕವೆಂದು ತಿಳಿಯುತ್ತಿದೆ. ಎಷ್ಟೋ ಬಲವಾದ ಪರಿಕರವು ಇನ್ನು ಅವಶ್ಯಕವೆಂದು ತಿಳಿಯುತ್ತಿದೆ. ಎಷ್ಟೋ ಬಲವಾದ ಪರಿಕರ ಇನ್ನೂ ದೊಡ್ಡದಾದ ಪರಿಕರ ಚಲಿಸುವುದಕ್ಕೆ ಒಂದು ಶಕ್ತಿ ಅವಶ್ಯಕವೆಂದು, ಅದೇ ವಿದ್ಯುತ್ ಶಕ್ತಿ ಎಂದು ಎಲ್ಲರಿಗೂ ತಿಳಿದ ವಿಷಯವೆ. ಕೆಲಸ ಮಾಡುತ್ತಿರುವ ಸ್ಥೂಲವಾಗಿರುವ ಯಂತ್ರ ಕಾಣಿಸುತ್ತದೆ, ಆದರೆ ಯಂತ್ರವನ್ನು ಕದಲಿಸುವ ವಿದ್ಯುತ್ ಯಾರಿಗೂ ಕಾಣಿಸುತ್ತಿಲ್ಲ. ಕರೆಂಟು ತಂತಿಯನ್ನು ನಾವು ನೋಡಬಹುದಾಗಲಿ, ಅದರಲ್ಲಿ ಪ್ರಯಾಣಿಸುವ ಕರೆಂಟನ್ನು ನೋಡಲಾರೆವು. ಕರೆಂಟು ಸೂಕ್ಷ್ಮವಾದುದು ಆದ್ದರಿಂದ ಕಾಣಿಸುವುದಿಲ್ಲ. ಕಾಣಿಸದ ಮಾತ್ರಕ್ಕೆ ಕರೆಂಟನ್ನು ಯಾರು ಇಲ್ಲ ಎನ್ನುವುದಿಲ್ಲ. ಕಾಣಿಸದಂತೆ ಇದ್ದರೂ ಇದೆಯೆಂದು ಅದನ್ನು ತಪ್ಪದೆ ನಂಬಬೇಕಾಗಿದ್ದೆ. ಇಲ್ಲಿ ಕರೆಂಟ್‌ನಿಂದ ಕೆಲಸ ನಡೆಯುತ್ತಿದೆ ಎಂದು, ಅದು ಇದ್ದಂತೆ ನಿರೂಪಿಸಲ್ಪಡುತ್ತಿದೆ ಎಂದು, ಆದುದರಿಂದ

ಕಾಣಿಸದಿದ್ದರು ಅದರ ಕೆಲಸವು ತಿಳಿಯುವುದರಿಂದ ಅದು ಸೈನ್ಸ್‌ಗೆ ಸಿಗುವ ವಿಷಯವೆಂದು ಹೇತುವಾದಿಗಳು ಹೇಳಬಹುದು. ಹೇತುವಾದಿಗಳು ಇಲ್ಲಿ ಕಾಣಿಸದ ಕರೆಂಟನ್ನು ನಂಬಿದಂತೆ ಅಲ್ಲವೆ!

ಭೂಮಿ ಮೇಲಿರುವ ಚಿಕ್ಕ, ದೊಡ್ಡವು ಆದ ಅನೇಕ ರೀತಿಯ ಶರೀರಗಳು ಸ್ಥೂಲವಾಗಿ ಕಾಣಿಸುತ್ತಿವೆ. ಆಯಾ ಶರೀರದಲ್ಲಿ ಕದಲಿಸುವ ಶಕ್ತಿಯೂ ಇದೆ. ಶಕ್ತಿ ಇರುವವರೆಗೂ ಶರೀರಗಳು ಕದಲುತ್ತಿರುತ್ತವೆ. ಕರೆಂಟು ಇರುವವರೆಗೂ ತಿರುಗಿದ ಫ್ಯಾನ್, ಕರೆಂಟ್ ಹೋದ ತಕ್ಷಣ ನಿಂತುಹೋದಂತೆ ಶರೀರದಲ್ಲಿ ಶಕ್ತಿ ಇರುವವರೆಗೂ ಕದಲಿ ತಿರುಗಾಡಿದ ಶರೀರ ಶಕ್ತಿ ಹೋದ ತಕ್ಷಣ ಚೈತನ್ಯ ಇಲ್ಲದಂತೆಹೋಗುತ್ತದೆ. ಫ್ಯಾನನ್ನು ತಿರುಗಿಸುವ ಶಕ್ತಿಗೆ ನಾವೊಂದು ಹೆಸರು ಇಟ್ಟುಕೊಂಡಿದ್ದೇವೆ ಅದೇ ವಿದ್ಯುತ್ ಶಕ್ತಿ. ಹಾಗೆ ಶರೀರವನ್ನು ಕದಲಿಸುವ ಶಕ್ತಿಗೂ ಸಹ ಒಂದು ಹೆಸರು ಇಟ್ಟುಕೊಂಡಿದ್ದೇವೆ ಅದೇ ಆತ್ಮಶಕ್ತಿ. ಶಕ್ತಿಗಳ ಹೆಸರಿನಲ್ಲಿ ಬದಲಾವಣೆಗಳು ಇವೆ. ಆದರೆ ಎರಡೂ ಮಾಡುವ ಕೆಲಸ ಕದಲಿಸುವುದೆ. ಕರೆಂಟಿನ ಬಗ್ಗೆ ತಿಳಿದುಕೊಳ್ಳುವುದಕ್ಕೆ ಎಷ್ಟೋ ವಿವರ ಶೇಕರಿಸಿ ಇಟ್ಟುಕೊಂಡಿದ್ದೇವೆ. ಕರೆಂಟ್ ಎಂದರೆ ಏನು? ಅದರ ಓಲ್ಟೇಜ್ ಎಂದರೆ ಏನು? ಅದು ಪ್ರಯಾಣ ಮಾಡುವುದಕ್ಕೆ ಯಾವ ಲೋಹ ಅವಶ್ಯ? ಯಾವ ವಿಧವಾದ ಪರಿಕರಗಳ ಮೇಲೆ ಕೆಲಸ ಮಾಡುತ್ತದೆ? ಅದು ಹೇಗೆ ಆಪ್ ಆನ್ ಆಗುತ್ತಿದೆ? ಮೊದಲು ಅದು ಹೇಗೆ ಹುಟ್ಟುತ್ತಿದೆ? ಎನ್ನುವ ಪ್ರಶ್ನೆಗಳಿಗೆಲ್ಲಾ ಉತ್ತರ ಇದೆ. ಇದೆಲ್ಲವೂ ಪರಿಶೋಧನೆಗಳ ಮೂಲಕ ತಿಳಿದುಕೊಂಡಾಗಲೇ ತಿಳಿದಿದೆ. ಕರೆಂಟ್ (ವಿದ್ಯುತ್) ಪ್ರಪಂಚ ಹುಟ್ಟಿದಾಗಿನಿಂದ ಇದ್ದರೂ, ಅದು ಯಾರಿಗೂ ತಿಳಿಯದು. ಎಷ್ಟೋ ಯುಗಗಳು ಕಳೆದು ಹೋದರೂ ತಿಳಿಯದ ಕರೆಂಟಿನ ಬಗ್ಗೆ ಈಮಧ್ಯೆ ಕೆಲವು ನೂರು ವರ್ಷಗಳ ಪೂರ್ವದಲ್ಲಿ ಕಂಡುಕೊಂಡಿದ್ದೇವೆ. ಕರೆಂಟಿನಲ್ಲಿ ಪಾಜಿಟೀವ್, ನೆಗಿಟೀವ್, ಎಂದು ಎರಡಿರುವಂತೆ, ಪೂರ್ವದಿಂದ ಧನಧೃವ, ಋಣಧೃವ, ಎಂದು ಎರಡು ಇವೆ. ಆಕಾಶದಲ್ಲಿ ಧನಧೃವವು, ಭೂಮಿಯಲ್ಲಿ ಋಣಧೃವಗಳಿವೆಯೆಂದು, ಬೇಸಿಗೆಕಾಲದಲ್ಲಿ ಬರುವ

ಮೊದಲನೆ (ಮುಂಗಾರು) ಮಳೆಯಲ್ಲಿ ಧನಋಣ ಧೃವಗಳು ಕೂಡುವುದರಿಂದಲೇ, ಮಿಂಚುಗಳು, ದೊಡ್ಡ ಶಬ್ಧದಿಂದ ದೊಡ್ಡ ಗುಡುಗುಗಳು ಹುಟ್ಟುತ್ತಿವೆ ಎಂದೂ ಸಹ ಹೇಳುತ್ತಿದ್ದಾರೆ. ದೊಡ್ಡ ಬೆಳಕು, ದೊಡ್ಡ ಶಬ್ದ ಪ್ರತ್ಯಕ್ಷವಾಗಿ ಕಾಣಿಸುವುದರಿಂದ, ಮತ್ತು ಸಿಡಿಲು ಎಂಬ ಹೆಸರಿನಿಂದ ಷಾಕ್ ತಗಲುವುದರಿಂದ, ಮನುಷ್ಯರು, ಪ್ರಾಣಿಗಳು ಸತ್ತುಹೋಗುವುದು ಸಹ ನಡೆಯುವುದರಿಂದ ಅದನ್ನು ಕರೆಂಟೆಂದು, ಅದನ್ನೇ **ಆಕಾಶ ಕರೆಂಟೆಂದು** ಪೂರ್ವದಿಂದ ಹೇಳುವುದು ನಡೆಯುತ್ತಿದೆ. ಹಿಂದಿ ಭಾಷೆಯಲ್ಲಿ **ಆಸ್ಮಾನಿ ಬಿಜಿಲಿ** ಎಂದೂ ಸಹ ಅನ್ನುತ್ತೇವೆ. ಇಷ್ಟು ದೊಡ್ಡ ಕರೆಂಟ್ ತಯಾರಾಗುವುದಕ್ಕೆ ಕಾರಣ ಭೂಮಿಗೆ ಇರುವ ಅಯಸ್ಕಾಂತ ಶಕ್ತಿಯೇ ಮೂಲ. ಅಯಸ್ಕಾಂತಕ್ಕೆ ಉತ್ತರ ದಕ್ಷಿಣ ಧೃವಗಳು ಎರಡು ಇರುತ್ತವೆ. ಪ್ರಪಂಚ ಮೊತ್ತವೆಲ್ಲ ಅಯಸ್ಕಾಂತ ಶಕ್ತಿ ಉತ್ತರ, ದಕ್ಷಿಣ ಧೃವಗಳಾಗಿದ್ದು, ರಾತ್ರಿ ಸಮಯ ನಕ್ಷತ್ರಪುಂಜಗಳ ರೂಪವಾಗಿ ಕಾಣಿಸುತ್ತಿದೆ. ಈ ಉತ್ತರ ದಕ್ಷಿಣ ಧೃವಗಳಿಂದಲೇ ಕರೆಂಟ್ ಧನ ಋಣ (ಪಾಜಿಟೀವ್ ನೆಗಟೀವ್) ಧೃವಗಳಾಗಿ ತಯಾರಾಗುತ್ತಿದೆ. ಕಾಣಿಸದ ಅಯಸ್ಕಾಂತ ಶಕ್ತಿಯಿಂದ ಕಾಣಿಸದ ಕರೆಂಟು ತಯಾರಾಗುತ್ತಿದೆ. ಈ ಸೂತ್ರದ ಮೇಲೆಯೇ ಈದಿನ ಅಯಸ್ಕಾಂತಗಳ ಮೂಲಕ ಕರೆಂಟು ತಯಾರು ಮಾಡುತ್ತಿದ್ದಾರೆ. ಇಲ್ಲಿಯವರೆಗೂ ಕರೆಂಟ್ ವಿವರವು ಸ್ವಲ್ಪ ತಿಳಿದುಕೊಂಡಿದ್ದೇವೆ. ಈಗ ಕರೆಂಟಿನಂತೆ ಇರುವ ಆತ್ಮವನ್ನು ತಿಳಿದುಕೊಳ್ಳೋಣ.

ಯಂತ್ರವನ್ನು ಕದಲಿಸುವುದು ವಿದ್ಯುತ್, ಶರೀರವನ್ನು ಕದಲಿಸುವುದು ಆತ್ಮ. ವಿದ್ಯುತ್‌ಗಿರುವ ಶಕ್ತಿಯನ್ನು ವಿದ್ಯುತ್ ಶಕ್ತಿ ಎನ್ನುತ್ತಿದ್ದೇವೆ. ಆತ್ಮಕ್ಕೆ ಇರುವ ಶಕ್ತಿಯನ್ನು ಆತ್ಮ ಶಕ್ತಿ ಅನ್ನುತ್ತೇವೆ. ವಿದ್ಯುತ್ ಕಾಣಿಸದ ಅಯಸ್ಕಾಂತ ಶಕ್ತಿ ಮೂಲಕ ತಯಾರಾಗಿದೆ. ಆತ್ಮ ಕಾಣಿಸದ ಒಂದು ಆದಿ, ಅಂತ್ಯ ಇಲ್ಲದ ಶಕ್ತಿ ಮೂಲಕ ತಯಾರಾಗಿದೆ. ಅನಂತ ಶಕ್ತಿ ಮೂಲಕ ತಾಯಾರಾಗಿರುವ ಶಕ್ತಿ ಹೇತುವಾದಿಗಳು, ನಾಸ್ತಿಕವಾದಿಗಳು ಎಂದುಕೊಳ್ಳುವವರಲ್ಲಿಯೂ ಸಹ ಇದೆ. ಹೇತುವಾದಿಗಳ ಶರೀರದಲ್ಲಿನ ಎಲ್ಲ ಭಾಗಗಳಿಗೂ ಅನಂತಶಕ್ತಿ ಮೂಲಕ

ತಯಾರಾದ ಆತ್ಮಶಕ್ತಿಯೇ ಉಪಯೋಗಪಡುತ್ತಿದೆ. ಯಾವ ಶಕ್ತಿಯಿಂದ ತಾವು ಚಲಿಸುತ್ತಿದ್ದಾರೋ ಆ ಶಕ್ತಿಯನ್ನು, ಅದಕ್ಕೆ ಮೂಲವಾದ ಆದಿ ಅಂತ್ಯರಹಿತ ಶಕ್ತಿಯನ್ನು ಹೇತುವಾದಿಗಳು ಸಹ ಅಲ್ಲ ಎನ್ನಲಾರರು. ಶರೀರದಲ್ಲಿ ಶಕ್ತಿ ಇದೆ ಎಂದು ಒಪ್ಪಿಕೊಳ್ಳುವವರು ಆ ಶಕ್ತಿಗೆ ಆತ್ಮಶಕ್ತಿ ಎಂದು ಹೆಸರು ಇಟ್ಟರೆ ಒಪ್ಪಿಕೊಳ್ಳದಿರುವುದೇನು? ಹಾಗೆಯೇ ಆತ್ಮಶಕ್ತಿಗೆ ಮೂಲವಾಗಿ, ಆತ್ಮಗಿಂತ ಪರವಾಗಿರುವ ಶಕ್ತಿಯನ್ನು ಪರಮಾತ್ಮ ಎಂದರೆ ಅದೇನೋ ಅಲರ್ಜಿಯಂತೆ ನಮಗೆ ಆ ಮಾತು ಸರಿಹೋಗುವುದಿಲ್ಲ, ನಾವು ಒಪ್ಪಿಕೊಳ್ಳುವುದಿಲ್ಲ ಅಂದರೆ ಅದನ್ನು ಹೇತುವಾದ ಅನ್ನುತ್ತೇವಾ? ಶರೀರದಲ್ಲಿ ಚೈತನ್ಯ ಶಕ್ತಿಯನ್ನು ದೈವಶಕ್ತಿ ಎಂದು ಹೇಳಿದರೆ ಏಕೆ ಅಲ್ಲ ಎನ್ನಬೇಕು? ಭಗವದ್ಗೀತೆಯಲ್ಲಿ ಭಗವಂತನು ಹೇಳಿರುವುದೆಲ್ಲಾ ಶರೀರದಲ್ಲಿ ಕರೆಂಟಿನಂತೆ ಕೆಲಸ ಮಾಡುವ ಶಕ್ತಿಯನ್ನು ಅಲ್ಲವೆ! ಗೀತೆಯಲ್ಲಿ ಶರೀರಾಂತರ್ಗತವಾಗಿರುವ ಶಕ್ತಿ ಎಂದರೆ ಏನೋ, ಅದು ಹೇಗಿದೆಯೋ, ಅದು ಎಲ್ಲರಲ್ಲಿಯೂ ಹೇಗೆ ಕೆಲಸಮಾಡುತ್ತಿದೆಯೋ ವಿವರವಾಗಿ ಹೇಳಲಾಗಿದೆ. ಯಂತ್ರದಲ್ಲಿ ಕೆಲಸ ಮಾಡುವ ಶಕ್ತಿಯಾದ ಕರೆಂಟನ್ನು ವಿವರವಾಗಿ ವಿಜ್ಞಾನದ (ಸೈನ್ಸ್) ಮೂಲಕವೇ ಹೇಳಿದಂತೆ ಶರೀರ ಯಂತ್ರದಲ್ಲಿ ಕೆಲಸ ಮಾಡುವ ಶಕ್ತಿಯಾದ ಆತ್ಮವನ್ನು ವಿವರವಾಗಿ ವಿಜ್ಞಾನದ (ಸೈನ್ಸು) ಮೂಲಕವೆ ಹೇಳಿದ್ದಾರೆ. ಯಂತ್ರಗಳ ಶಕ್ತಿಯನ್ನು ಸೈನ್ಸ್ ಎಂದಾಗ ಶರೀರಗಳ ಶಕ್ತಿಯನ್ನು ಸೈನ್ಸು ಎಂದು ಏಕೆ ಹೇಳಬಾರದು? 1) ಕರೆಂಟು ಕಾಣಿಸದ ಶಕ್ತಿಯೇ, ಆತ್ಮವು ಕಾಣಿಸದ ಶಕ್ತಿಯೇ. 2) ಕರೆಂಟು ಒಂದು ಕಡೆಯಿಂದ ಹುಟ್ಟಿರುವುದೆ ಅದೇ ವಿಧವಾಗಿ ಆತ್ಮವು ಒಂದು ಕೇಂದ್ರದಿಂದ ಹುಟ್ಟಿರುವುದೆ. 3) ಕರೆಂಟು ಯಂತ್ರವನ್ನು ಕದಲಿಸುತ್ತಿದೆ, ಹಾಗೆ ಆತ್ಮ ಶರೀರ ಯಂತ್ರವನ್ನು ಕದಲಿಸುತ್ತಿದೆ. 4) ಕರೆಂಟು ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣಿಸುತ್ತಿದೆ. ಹಾಗೆ ಆತ್ಮ ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣಿಸುತ್ತಿದೆ. 5) ಕರೆಂಟು ಪ್ರಯಾಣಿಸುವುದಕ್ಕೆ ಲೋಹದ ಅವಶ್ಯಕತೆ ಇದೆ. ಹಾಗೆಯೇ ಆತ್ಮ ಪ್ರಯಾಣಿಸುವುದಕ್ಕೆ ಶೂನ್ಯವು (ಆಕಾಶವು) ಅಗತ್ಯವಾಗಿದೆ.

6) ಕರೆಂಟಿಗೆ ಎರಡು ಧೃವಗಳು ಇವೆ, ಹಾಗೆ ಆತ್ಮಗೂ ಎರಡು ಧೃವಗಳು ಇವೆ. 7) ಕರೆಂಟಿಗೆ ಪ್ಲಸ್ (+) ಮೈನೆಸ್ (–) ಧೃವಗಳಾದರೆ, ಆತ್ಮಕ್ಕೆ ಉತ್ತರ ದಕ್ಷಿಣಗಳು ಧೃವಗಳಾಗಿವೆ. 8) ಕರೆಂಟು ಅಯಸ್ಕಾಂತದಿಂದ ಹುಟ್ಟಿರುವಾಗ, ಆತ್ಮ ಅಯಸ್ಕಾಂತಕ್ಕೆ ಅಯಸ್ಕಾಂತವಾದ ಶಕ್ತಿಯಿಂದ ಹುಟ್ಟಿದೆ. 9) ಕರೆಂಟು ಎರಡು ಧೃವಗಳನ್ನು ಕೂಡಿಸಿದರೆ ಬೆಂಕಿ ಹುಟ್ಟುತ್ತದೆ. ಹಾಗೆ ಆತ್ಮದ ಉತ್ತರ, ದಕ್ಷಿಣ ಧೃವಗಳು ಕೂಡಿಸಿದರೆ ಎಂದರೆ ಬಲ ಎಡ ಶ್ವಾಸಗಳನ್ನು ಸೇರಿಸಿ ನಿಲ್ಲಿಸಿದರೆ ಜ್ಞಾನಾಗ್ನಿ ಹುಟ್ಟುತ್ತದೆ. 10) ಕರೆಂಟುರೀಡಿಂಗ್ ಮೀಟರ್‌ಗಳಲ್ಲಿ ಇರುವಾಗ, ಆತ್ಮರೀಡಿಂಗ್ ತಲೆಯಲ್ಲಿರುವ ಕರ್ಮ ಚಕ್ರದಲ್ಲಿದೆ. 11) ಕರೆಂಟುರೀಡಿಂಗ್ ಯುನಿಟ್‌ಗಳಲ್ಲಿದ್ದರೆ ಆತ್ಮ ರೀಡಿಂಗ್ ಪಾಪ ಪುಣ್ಯಗಳೆಂಬ ಯುನಿಟ್‌ಗಳಲ್ಲಿ ಇರುತ್ತದೆ. 12) ಕರೆಂಟಿಗೆ ಮೇಯಿನ್ ಸ್ಟೇಷನ್ ಸಬ್ ಸ್ಟೇಷನ್ ಇರುವಂತೆ, ಆತ್ಮಕ್ಕೆ ದೊಡ್ಡ ಸ್ಟೇಷನ್ ಮೆದುಳಾಗಿದ್ದು, ಚಿಕ್ಕ ಸ್ಟೇಷನ್‌ಗಳಾಗಿ ಆರು ನಾಡಿ ಕೇಂದ್ರಗಳು ಇವೆ. 13) ಕರೆಂಟು ಸಪ್ಲೆ ನಿಂತುಹೋದರೆ ಯಂತ್ರಗಳಲ್ಲಿ ಸ್ವಲ್ಪ ಭಾಗವು ಕೆಲಸಮಾಡದಂತೆ, ಶರೀರದಲ್ಲಿ ಒಂದು ನಾಡಿಕೇಂದ್ರದಿಂದ ಆತ್ಮಶಕ್ತಿ ನಿಂತು ಹೋದರೆ ಆ ಕೇಂದ್ರದ ಅಧೀನದಲ್ಲಿರುವ ಅವಯವಗಳು ಕಾಲುಗಳಾಗಲಿ, ಕೈಗಳಾಗಲಿ ಕೆಲಸ ಮಾಡುವುದಿಲ್ಲ. 14) ಕರೆಂಟು ಶಕ್ತಿಯನ್ನು ತಿಳಿಯಬಹುದು, ಆದರೆ ಅಯಸ್ಕಾಂತ ಶಕ್ತಿ ಎಂತಹದ್ದೋ ಅದರ ಹುಟ್ಟು ಪೂರ್ವೋತ್ತರವೇನೋ ತಿಳಿಯದು. ಹಾಗೆಯೆ ಆತ್ಮವನ್ನು ತಿಳಿಯಬಹುದಾಗಲಿ ಅದಕ್ಕೆ ಮೂಲವಾದ ಪರಮಾತ್ಮ ಎಂತಹದ್ದೋ ಅದೇನೋ ಸಹ ಯಾರಿಗೂ ತಿಳಿದಿಲ್ಲ. ಹೀಗೆ ಎಷ್ಟೋ ವಿಧಗಳ ಹೊರಗಿನ ಕರೆಂಟಿಗೆ ಸಮಾನವಾಗಿ ಶರೀರದಲ್ಲಿ ಆತ್ಮ ಇದೆ. ಶರೀರದಲ್ಲಿರುವ ಶಕ್ತಿಯನ್ನು ಆತ್ಮ ಎಂದು, ಅದರ ಉತ್ಪತ್ತಿ ಸ್ಥಾನವನ್ನು ಪರಮಾತ್ಮ ಎಂದು ಹೆಸರು ಇಟ್ಟುಕೊಂಡಿದ್ದೇವೆ. ಶರೀರದಲ್ಲಿರುವ ಆತ್ಮ ಎಲ್ಲರಲ್ಲಿಯೂ ಒಂದೇ ವಿಧವಾಗಿದೆ. ಆದ್ದರಿಂದ ಹೇತುವಾದಿಗಳು ತಮ್ಮ ಶರೀರದಲ್ಲಿನ ಶಕ್ತಿಯನ್ನು ಕುರಿತು ಆಲೋಚಿಸಿ ಅದನ್ನು ಇಲ್ಲ ಎಂದರೆ, ದೇವರನ್ನೂ ಸಹ ಇಲ್ಲ ಅನ್ನಬಹುದು.

ಶಾಸ್ತ್ರಬದ್ಧವಾದುದು, ಹೇತುಬದ್ಧವಾದುದು ಭಗವದ್ಗೀತೆ.! ಆಸ್ತಿಕರೆಂದು ಕೊಂಡು ಯಜ್ಞಯಾಗಾದಿಗಳು, ವೇದಾಧ್ಯಯನಗಳು, ತಪಸ್ಸು ಮಾಡುವವರನ್ನು ಭಗವದ್ಗೀತೆ ಪೂರ್ತಿ ಖಂಡಿಸಿದೆ. ನೀವು ಅಂದುಕೊಂಡ ಮಾರ್ಗಗಳಲ್ಲಿ ದೇವರು ಲಭಿಸುವುದಿಲ್ಲವೆಂದೂ ಸಹ ಹೇಳಿದೆ. ಯಾರಾದರಾಗಲೀ ಶರೀರದಲ್ಲಿ ಪರಿಶೋಧನೆ ಮಾಡಿದರೆ ಆತ್ಮ ತಿಳಿಯಲ್ಪಡುತ್ತದೆಂದು, ಆತ್ಮಕ್ಕೆ ಮೂಲ ಕಾರಣವಾದ ಪರಮಾತ್ಮ ಯಾರಿಗೂ ತಿಳಿಯುವುದಿಲ್ಲ ಎಂದೂ ಸಹ ಹೇಳಿದೆ. ಇಲ್ಲಿಯವರೆಗೂ ಯಾರಾಗಲಿ ಯಾವ ಮಾನವನಾಗಲಿ ದೇವರನ್ನು ನೋಡಿದವರು ಇಲ್ಲವೆಂದು ಸಹ ಹೇಳಿದೆ. ದೇವರನ್ನು ತಿಳಿದುಕೊಳ್ಳಬೇಕೆಂದರೆ ಶರೀರದಲ್ಲಿರುವ ಆತ್ಮವನ್ನು ತಿಳಿಯಬೇಕೆಂದು, ಅದೇ ಆತ್ಮ ಜ್ಞಾನ ಎಂದು ಹೇಳಿದೆ. ಹೊರಗಿನ ದೇವಾಲಯವು ಶರೀರ ನಿರ್ಮಾಣವನ್ನನುಸರಿಸಿ ತಯಾರು ಮಾಡಿದೆ ಎಂದೂ, ಗುಡಿಯಲ್ಲಿನ ಪ್ರತಿಮೆ ಶರೀರದಲ್ಲಿನ ಆತ್ಮವನ್ನು ಅನುಸರಿಸಿ ಮಾಡಿರುವುದೆಂದು, ಹೊರಗಿನ ಗುಡಿಯನ್ನು, ಅದರಲ್ಲಿನ ಪ್ರತಿಮೆಯನ್ನು ನೋಡಿದಾಗ ಶರೀರವು, ಅದರಲ್ಲಿನ ಆತ್ಮ ಜ್ಞಾಪಕಕ್ಕೆ ಬರುವಂತಿವೆಯೆಂದು ಹೇಳಿದೆ. ದೇವಾಲಯಗಳಲ್ಲಿನ ಆರಾಧನೆಗಳು ಶರೀರದಲ್ಲಿನ ಆತ್ಮವನ್ನು ತಿಳಿದು ಕೊಳ್ಳುವ ಸಾಧನೆಗಳ ರೂಪವೆಂದು ತಿಳಿಯಬೇಕು. ಆಸ್ತಿಕತ್ವವು ಪೂರ್ತಿ ಯಾಗಿ ಭಗವದ್ಗೀತೆಯಲ್ಲಿ ಇರುವಾಗ, ಶರೀರದಲ್ಲಿ ಪರಿಶೋಧಿಸದೆ ಗೀತೆಗೆ ವಿರುದ್ಧವಾಗಿ ಯಜ್ಞಯಾಗಾದಿಗಳು, ವೇದಪಠನೆಗಳು, ತಪಸ್ಸುಗಳು ಮಾಡುವ ವರು ಆಸ್ತಿಕರು ಅಲ್ಲ. ಹಾಗೆ ಶಾಸ್ತ್ರೀಯತೆ ಹೇತುಬದ್ಧತೆ ಪೂರ್ತಿಯಾಗಿ ಭಗವದ್ಗೀತೆಯಲ್ಲಿ ಒಳಗೊಂಡಿರುವಾಗ, ಭಗವದ್ಗೀತೆಯನ್ನೇ ಕಲ್ಪಿತವೆಂದು ಅದಕ್ಕೆ ವಿರುದ್ಧವಾಗಿ ಆತ್ಮ, ಪರಮಾತ್ಮ ಇಲ್ಲ ಎನ್ನುವವರು ನಾಸ್ತಿಕರೂ ಅಲ್ಲ, ಹೇತುವಾದಿಗಳು ಅಲ್ಲ. ಈಗಿರುವ ಆಸ್ತಿಕತ್ವಕ್ಕೂ, ನಾಸ್ತಿಕತ್ವಕ್ಕೂ ಭಗವದ್ಗೀತೆ ವಿರುದ್ಧವಾಗಿದೆ ಎಂದು, ವಿಜ್ಞಾನಗಳಿಗೆಲ್ಲ ವಿಜ್ಞಾನವಾದ ಗೀತೆ ಈದಿನದ ಹೇತುವಾದಿಗಳನ್ನು, ಆಸ್ತಿಕವಾದಿಗಳನ್ನು ಸ್ವಲ್ಪವೂ ಸಹ ಒಪ್ಪಿಕೊಳ್ಳುವುದಿಲ್ಲ ಎಂದು ತಿಳಿಯಬೇಕು. ಈಗಲಾದರೂ ತಮಗಿರುವ ವಿಶ್ವಾಸವೇನೋ (ನಂಬಿಕೆಯೇನೋ) ಆಸ್ತಿಕರು, ಹಾಗೆ ತಮಗಿರುವ ಅವಿಶ್ವಾಸವೇನೋ

ಹೇತುವಾದಿಗಳು ಪುನರಾಲೋಚಿಸಿಕೊಳ್ಳಬೇಕೆಂದು ಕೋರುತ್ತಿದ್ದೇವೆ. ನಿಜವಾದ ಆಸ್ತಿಕತ್ವಕ್ಕೂ, ನಿಜವಾದ ಹೇತುವಾದಕ್ಕೂ, ಸರಿಯಾದ ವೇದಿಕೆ ಶರೀರವೆಂದು, ಅದರಲ್ಲಿನ ಪರಿಶೋಧನೆ ನಿಜವಾದ ವಿಜ್ಞಾನವೆಂದು (ಸೈನ್ಸೆಂದು) ತಿಳಿಸುತ್ತಿದ್ದೇವೆ.

ಇಂತಿ

**ತ್ರಿಮತ ಏಕೈಕ ಗುರುವು ,ಇಂದೂ ಧರ್ಮಪ್ರದಾತ**

**ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ**

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



# ರಚನಕಾರರ ಕೊನೆಯ ಮಾತು

ದ್ವಾಪರಯುಗದಲ್ಲಿ ದೇವರ ಧರ್ಮಗಳಿಗೆ ಹಾನಿ ಏರ್ಪಟ್ಟಿದೆ. ಆ ಕಾಲದಲ್ಲಿರುವ ಮುನಿಗಳು ಮಹರ್ಷಿಗಳು ದೈವಮಾರ್ಗಗಳನ್ನು ಬಿಟ್ಟು ಮಾಯ ಧರ್ಮಗಳಾದ ಯಜ್ಞಯಾಗಾದಿಗಳು, ಜಪತಪಗಳು, ವ್ರತಕ್ರತುಗಳಲ್ಲಿ ಲಗ್ನವಾಗಿಹೋಗಿದ್ದಾರೆ. ದೈವಭಕ್ತಿ ಎಂದರೆ ಮಹರ್ಷಿಗಳು, ಮುನಿಗಳು ಮಾಡುವ ಆಚರಣೆಗಳೇ ಎಂದು, ಪ್ರಜೆಗಳು ನಂಬಿ ಅವರನ್ನೇ ಅನುಸರಿಸಿದ್ದಾರೆ. ಇದು ಸರಿಯಾದ ಮಾರ್ಗವೆಂದು ಹೇಳುವವರು ಇಲ್ಲದಂತೆಹೋಗಿದ್ದಾರೆ. ಅಂತಹ ಪರಿಸ್ಥಿತಿಯಲ್ಲಿ ಮಾನವನಿಗೆ ಹದ್ದು (ಗೀತೆ) ಎಂಬ ಹೆಸರಿನಲ್ಲಿ ಧರ್ಮಗಳನ್ನು ದೇವರು ತಿಳಿಸಿದ್ದಾನೆ. ಆ ವಿಧವಾಗಿ ತಿಳಿಸಿದರೂ ಈಗಿನ ಮಾನವನು ಗೀತೆಯನ್ನು ಸಹ ಅತಿಕ್ರಮಿಸಿ ಪೂರ್ವದ ಪರಿಸ್ಥಿತಿಗಿಂತ ಹೆಚ್ಚಾಗಿ ಕೆಳಮಟ್ಟಕ್ಕೆ ಹೋಗಿದ್ದಾನೆ. ವಿಶ್ವಕ್ಕೆಲ್ಲ ಮೂಲಕಾರಣವಾದ ದೇವರನ್ನು ವಿಸ್ಮರಿಸಿ, ತಮಗೆ ಇಷ್ಟಬಂದ ದೇವತೆಗಳನ್ನು ತಯಾರು ಮಾಡುಕೊಳ್ಳುತ್ತಿದ್ದಾನೆ. 5260 ವರ್ಷಗಳ ಪೂರ್ವ ದ್ವಾಪರಯುಗದಲ್ಲಿ ಇಲ್ಲದ ಮತಗಳು ಈಗ ತಯಾರಾಗಿವೆ. ಯಾರ ಮತವನ್ನು ಅವರು, ಯಾರ ದೇವರನ್ನು ಅವರು ದೊಡ್ಡದಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಅಂತಹವರಿಗೆ ಎಲ್ಲರಿಗೂ

ದೇವರೊಬ್ಬನೇ ಎಂದು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇಲ್ಲ. ಈ ವಿಧವಾಗಿ ದೈವವಿರುದ್ಧವಾದ ಮಾಯೆ, ಮಾನವರಲ್ಲಿ ಸ್ಥಾನ ಮಾಡಿಕೊಂಡು ನಿಮ್ಮದೆ ನಿಜವಾದ ಭಕ್ತಿ ಎಂದು ಅವರಲ್ಲಿ ಗಾಢಮುದ್ರೆ ಹಾಕಿದೆ. ಈ ವಿಧವಾಗಿ ಕೆಲವರನ್ನು ದೈವ ವಿಶ್ವಾಸಿಗಳೆಂದು ಭ್ರಮಿಸುವಂತೆ ಮಾಡಿ ದೇವರಿಗೆ ದೂರ ಮಾಡಿದೆ. ಹಾಗೆಯೇ ಮತ್ತೆ ಕೆಲವರಿಗೆ ದೇವರ ಮೇಲೆ ವಿಶ್ವಾಸವೇ ಇಲ್ಲದಂತೆ ಅನುಮಾನಗಳನ್ನು ಸೃಷ್ಟಿಸಿ, ಕೆಲವರನ್ನು ನಾಸ್ತಿಕರನ್ನಾಗಿ ಕೆಲವರನ್ನು ಹೇತುವಾದಿಗಳನ್ನಾಗಿ ಬದಲಾಯಿಸಿದೆ. ಹೀಗೆ ಮಾನವರು ದೇವರ ಬಗ್ಗೆ ವಿಶ್ವಾಸಿಗಳು, ಅವಿಶ್ವಾಸಿಗಳು ಎಂದು ಎರಡು ವಿಧಗಳಾಗಿ ಕಾಣಿಸುತ್ತಿದ್ದರೂ, ದೇವರ ಲೆಕ್ಕದಲ್ಲಿ ಎಲ್ಲರೂ ಅವಿಶ್ವಾಸಿಗಳೇ ಆಗಿದ್ದಾರೆ. ಇಂತಹ ಪರಿಸ್ಥಿತಿ ಬರುತ್ತದೆಂದೇ ನಾನು ಆಗಾಗ ಭೂಮಿ ಮೇಲೆ ಬಂದು ಪುನಃ ಧರ್ಮಗಳನ್ನು ನೆಲೆಗೊಳಿಸಬೇಕಾದ ಅವಶ್ಯಕತೆ ಇದೆ ಎಂದು ದೇವರು ಮೊದಲೇ ಹೇಳಿದ್ದಾನೆ. ದೇವರ ಧರ್ಮಗಳಿಗೆ ಅತಿ ಪ್ರಮಾದವು ಏರ್ಪಟ್ಟಿರುವ ಈ ಸಮಯದಲ್ಲಿ, ಎಲ್ಲ ಮತಗಳಲ್ಲಿಯೂ ಜ್ಞಾನಿಗಳೆಂಬ ಹೆಸರಿನಲ್ಲಿ ಮಾಯೆ ಪ್ರತಿನಿಧಿಗಳಿರುವ ಈ ಕಾಲದಲ್ಲಿ, ದೇವರೇ ಬಂದು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಮನುಷ್ಯನು ಇಲ್ಲ. ದೇವರ ಮಾತನ್ನೇ ಲೆಕ್ಕಿಸದವರು ನಮ್ಮ ಬರಹವನ್ನು ಲೆಕ್ಕಿಸುತ್ತಾರೆಂಬ ನಂಬಿಕೆ ಇಲ್ಲ, ಆದರೂ ಸತ್ಯ ತಿಳಿಸುವುದು ನನ್ನ ಕರ್ತವ್ಯ. ಮಾಯೆಗೆ ಅತೀತರಾದವರು ಗ್ರಹಿಸುತ್ತಾರೆಂದು ನಂಬುತ್ತಿದ್ದೇವೆ.



***ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ.***
***ಸತ್ಯವನ್ನು ಸಾವಿರ ಜನ ಅಲ್ಲ ಎಂದರೂ ಅದು ಅಸತ್ಯವಲ್ಲ.***



ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಓದಿಸಿರಿ!!

# ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು

ಂಗಗಳಾಗಿ ಇರುವ ಗ್ರಂಥ. ಮೊದಲ ಭಾಗದಲ್ಲಿ ಪಾಠಕರು ಕೇಳಿದ 388 ಪ್ರಶ್ನೆಗಳಿಗೆ ಉತ್ತರಗಳು

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.**

**2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.**

**3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.**

**4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.**

**5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.**

**6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




## ಇಂದೂ ಜ್ಞಾನವೇದಿಕೆ (I.G.V)

(Regd.No.: 168/2004)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

***www.dravidashreshtisangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)
(Regd.No.: 309/2015)
ತಾರ್ನಾಕ, ಹೈದರಾಬಾದ್, ತೆಲಂಗಾಣ–500007.
e-mail id : info@ravanabrahmadravidabrahmanasangham.org

*www.ravanabrahmadravidabrahmanasangham.org*

# ನಾಸ್ತಿಕರು–ಆಸ್ತಿಕರು



Author :
The Only Guru of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu